KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೪೪ | ಬೆಂಗಳೂರು, ಗುರುವಾರ, ಆಗಸ್ಟ್ ೧೩, ೨೦೦೯ (ಶ್ರಾವಣ ೨೨, ಶಕ ವರ್ಷ ೧೯೩೧) | ಸಂಚಿಕೆ ೩೩ |
|---|---|---|


## ಭಾಗ – ೬

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ:ಲೋಇ:ಮಂವಿ:ಟಿ.ಎನ್‌ಡಿ(20):2009–10:ಎಇ–1, ಮಂಗಳೂರು, ದಿನಾಂಕ: 20ನೇ ಜುಲೈ 2009**

ಈ ಕೆಳಕಂಡ ಕೆಲಸಕ್ಕೆ ಪ್ರತ್ಯೇಕ ಮೊಹರಾದ ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿಸಲಾದ ಅರ್ಹ ದರ್ಜೆಯ ಗುತ್ತಿಗೆದಾರರಿಂದ ಕೆಲಸದ ಹೆಸರನ್ನು ಮೊಹರಾದ ಲಕೋಟೆಯ ಮೇಲೆ ನಮೂದಿಸಿದ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ದಿನಾಂಕ: 21.08.2009ರಂದು ಸಂಜೆ:4.00 ಗಂಟೆಯವರೆಗೆ ಟೆಂಡರುಗಳನ್ನು ಸ್ವೀಕರಿಸುವರು.

ಖಾಲಿ ಟೆಂಡರು ಫಾರಂಗಳ ಅರ್ಜಿಗಳನ್ನು ನಿಗದಿಪಡಿಸಿದ ಬೆಲೆಯೊಂದಿಗೆ (ಇದನ್ನು ಹಿಂತಿರುಗಿಸುವುದಿಲ್ಲ) ಮತ್ತು ನಿಗದಿಪಡಿಸಿದ ಇ.ಎಂ.ಡಿ.ಯೊಂದಿಗೆ ದಿನಾಂಕ: 17.08.2009ರ ವರೆಗೆ ಕೆಲಸದ ಎಲ್ಲಾ ದಿನಗಳಂದು ಕಛೇರಿ ವೇಳೆಯಲ್ಲಿ ಸ್ವೀಕರಿಸಲಾಗುವುದು. ಗುತ್ತಿಗೆದಾರರು ರಿಜಿಸ್ಟ್ರೇಷನ್ ಸರ್ಟಿಫೈಡ್ ಪ್ರತಿ ಹಾಗೂ ಈ ತರಹದ ಕಾಮಗಾರಿಗಳನ್ನು ಕೈಗೊಂಡ ಬಗ್ಗೆ ಅನುಭವ ಪತ್ರವನ್ನು ಸಲ್ಲಿಸತಕ್ಕದ್ದು. ಬಿಡ್ ಡಾಕ್ಯುಮೆಂಟ್ Section 3 ರಲ್ಲಿ ಕೇಳಿರುವ Qualification Information ನ್ನು ನಿಗದಿತ ನಮೂನೆಯಲ್ಲಿ ಅರ್ಜಿದಾರರು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಖಾಲಿ ಟೆಂಡರು ಫಾರಂಗಳನ್ನು ದಿನಾಂಕ: 18.08.2009 ರಿಂದ 20.08.2009 ರ ಸಂಜೆ:5.30ರ ತನಕ ನೀಡಲಾಗುವುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತು ಪಡಿಸಿ) | ಟೆಂಡರು ಫಾರಂ ಬೆಲೆ ತೆರಿಗೆ ಸೇರಿ (ರೂ.ಗಳಲ್ಲಿ) |
|---|---|---|---|---|---|---|
| I | **ಲೆಕ್ಕಶೀರ್ಷಿಕೆ** | | | | | |
| 1 | ಸುಳ್ಯ ತಾಲ್ಲೂಕು ಸುಳ್ಯದಲ್ಲಿ ತಹಶೀಲ್ದಾರರ ಕಛೇರಿಯಲ್ಲಿ ಗವರ್ನ್‌ಮೆಂಟ್ ಬಿಸಿನೆಸ್ ಸೆಂಟರ್, ಮತ್ತು ಐ.ಟಿ.ಸರ್ವರ್ ರೂಮ್ ಕಟ್ಟಡ ನಿರ್ಮಾಣ ಕಾಮಗಾರಿ | 6.57 | ಮೂರನೇ ದರ್ಜೆ ಮತ್ತು ಮೇಲ್ಪಟ್ಟು | 16,500.00 | 3 ತಿಂಗಳು | 1650.00 |

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಗುತ್ತಿಗೆದಾರರ ಅರ್ಹತೆ | ಇ.ಎಂ.ಡಿ ಠೇವಣಿ (ರೂ.ಗಳಲ್ಲಿ) | ಟೆಂಡರು ಅವಧಿ (ಮಳೆಗಾಲ ಹೊರತು ಪಡಿಸಿ) | ಟೆಂಡರು ಫಾರಂ ಬೆಲೆ ತೆರಿಗೆ ಸೇರಿ (ರೂ.ಗಳಲ್ಲಿ) |
|---|---|---|---|---|---|---|
| 2 | ಬೆಳ್ತಂಗಡಿ ತಾಲ್ಲೂಕು ಬೆಳ್ತಂಗಡಿಯಲ್ಲಿ ತಹಶೀಲ್ದಾರರ ಕಛೇರಿಯಲ್ಲಿ ಐ.ಟಿ.ಸರ್ವರ್ ರೂಮ್ ಕಟ್ಟಡ ನಿರ್ಮಾಣ ಕಾಮಗಾರಿ | 3.24 | ನಾಲ್ಕನೇ ದರ್ಜೆ ಮತ್ತು ಮೇಲ್ಪಟ್ಟು | 8,100.00 | 3 ತಿಂಗಳು | 1100.00 |
| 3 | ಪುತ್ತೂರು ತಾಲ್ಲೂಕು ಪುತ್ತೂರಿನಲ್ಲಿ ತಹಶೀಲ್ದಾರರ ಕಛೇರಿಯಲ್ಲಿ ಐ.ಟಿ.ಸರ್ವರ್ ರೂಮ್ ಕಟ್ಟಡ ನಿರ್ಮಾಣ ಕಾಮಗಾರಿ | 3.24 | ನಾಲ್ಕನೇ ದರ್ಜೆ ಮತ್ತು ಮೇಲ್ಪಟ್ಟು | 8,100.00 | 3 ತಿಂಗಳು | 1100.00 |

**ಸೂಚನೆಗಳು:–**

1. ಉದ್ದೇಶಿಸಿರುವ ಕಾಮಗಾರಿಯ ಶೇ. 50ರಷ್ಟು ಮೊತ್ತದ ಇದೇ ತರಹದ ಕಾಮಗಾರಿಯನ್ನು ಕಳೆದ 5 ವರ್ಷಗಳ ಅವಧಿಯ ಒಂದು ಆರ್ಥಿಕ ವರ್ಷದಲ್ಲಿ ಪೂರೈಸಿರತಕ್ಕದ್ದು. ಈ ಕುರಿತು ಪ್ರಮಾಣಪತ್ರವನ್ನು ಸಕ್ಷಮ ಅಧಿಕಾರಿಯವರಿಂದ ಪಡೆದು ಅರ್ಜಿಯೊಂದಿಗೆ ಸಲ್ಲಿಸತಕ್ಕದ್ದು.
2. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಇಲಾಖಾ ಅಧಿಕಾರಿಯವರು ಹೊಂದಿರುತ್ತಾರೆ.
3. ಇ.ಎಂ.ಡಿ.ಯನ್ನು ರಾಷ್ಟ್ರೀಕೃತ ಯಾ ಶೆಡ್ಯೂಲ್ ಬ್ಯಾಂಕಿನಿಂದ ಪಡೆದ ಎಫ್.ಡಿ.ಆರ್ / ಕಾಲ್‌ಡೆಪೋಸಿಟ್, ಡಿ.ಡಿ ಅಥವಾ ಎನ್.ಎಸ್.ಸಿ. ರೂಪದಲ್ಲಿ (ಎನ್‌ಎಸ್‌ಸಿಯನ್ನು ಕೆಳಸಹಿದಾರರ ಹೆಸರಿಗೆ ಪ್ಲೆಡ್ಜ್ ಮಾಡಿ) ಸಲ್ಲಿಸಬೇಕು. ನಿಗದಿಪಡಿಸಿದ ಮುಂಗಡ ಠೇವಣಿಯೊಂದಿಗೆ ಸಲ್ಲಿಸದ ಟೆಂಡರನ್ನು ಪರಿಗಣಿಸಲಾಗುವುದಿಲ್ಲ.
4. ಗುತ್ತಿಗೆದಾರರು ಕೆಲಸವನ್ನು ನಿಗದಿತ ಸಮಯದಲ್ಲಿ ಮಾಡಿ ಮುಗಿಸತಕ್ಕದ್ದು, ತಪ್ಪಿದಲ್ಲಿ ನಿಯಮದಂತೆ ದಂಡವನ್ನು ವಿಧಿಸಲಾಗುವುದು.
5. ಕಾಮಗಾರಿಗೆ ಬೇಕಾದ ಸಿಮೆಂಟ್, ಉಕ್ಕು ಮತ್ತು ಇನ್ನಿತರ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು ಹಾಗೂ ಇದನ್ನು ಸಕ್ಷಮ ಅಧಿಕಾರಿಯವರಿಂದ ಪರೀಕ್ಷೆ ಪಡೆದು ಫಲಿತಾಂಶವು ಐ.ಎಸ್.ಐ. ಗುಣವನ್ನು ಖಚಿತಪಡಿಸಿ ಕೆಲಸಕ್ಕೆ ಉಪಯೋಗಿಸತಕ್ಕದ್ದು. ಈ ಅಂಶವನ್ನು ಗುತ್ತಿಗೆದಾರರು ಟೆಂಡರನ್ನು ಸಲ್ಲಿಸುವಾಗ ಗಮನಿಸುವುದು.
6. ಯಶಸ್ವಿ ಟೆಂಡರುದಾರರು ನಿರ್ವಹಿಸುವ ಕಾಮಗಾರಿಯ ಮೊತ್ತದ ಶೇ.1ರಷ್ಟನ್ನು ಲೇಬರ್ ಸೆಸ್‌ನ್ನಾಗಿ ಸರಕಾರಿ ಆದೇಶ ಸಂ. ಯಲ್‌ಡಿ 3:ಎಲ್‌ಇಡಿ 2006:ಬೆಂಗಳೂರು: ದಿನಾಂಕ: 18.1.2007ರಂತೆ ಕಡಿತಗೊಳಿಸಲಾಗುವುದು.
7. ಕೆಲಸದ ಕುರಿತಾದ ಯಾವುದೇ ವಿವರಗಳನ್ನು ಕಛೇರಿ ವೇಳೆಯಲ್ಲಿ ಈ ಕಛೇರಿಯಿಂದ ಪಡೆಯಬಹುದಾಗಿದೆ. ಹಾಗೂ ಇಲಾಖೆಯ ವೆಬ್‌ಸೈಟ್ "htpp://www.kpwd.gov.in" ನಲ್ಲಿ ಸಂಪರ್ಕಿಸಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಪಿ.ಆರ್. 601 ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಇ–ಟೆಂಡರ್ – ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ) (2ನೇ ಕರೆ)**

**ಸಂಖ್ಯೆ:ಲೋ.ಇ:ಮಂವಿ:ಟಿಎನ್‌ಡಿ(21ಇ):2009–10:ಎಇ1, ಮಂಗಳೂರು, ದಿನಾಂಕ: 23ನೇ ಜುಲೈ 2009**

1 ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಇ–ಟೆಂಡರ್‌ನ್ನು ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಅರ್ಹರಾದ ಗುತ್ತಿಗೆದಾರರಿಂದ ಅಲ್ಪಾವಧಿ ಟೆಂಡರ್‌ನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಿರುತ್ತಾರೆ. ಟೆಂಡರುದಾರರು ಟೆಂಡರ್ ನಿಯಮಾವಳಿಯ ಕ್ಲಾಜ್ 3 ರಂತೆ ಕನಿಷ್ಟ ಅರ್ಹತೆಯನ್ನು ಪಡೆದಿರಬೇಕು ಎಂಬುದನ್ನು ಗಮನಿಸಲು ಸೂಚಿಸಲಾಗಿದೆ.

2. ದಿನಾಂಕ: 25.7.2009 ರಿಂದ 24.8.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download).
3. ಟೆಂಡರುಗಳು ಈ ಕೆಳಗೆ ನೀಡಲಾದ ವಿವರದಂತೆ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿಯನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಇ.ಎಂ.ಡಿ.ಯನ್ನು ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಸೂಚಿಸಿರುವಂತೆ ಯಾವುದಾದರೂ ಒಂದು ರೀತಿಯಲ್ಲಿ ಸಲ್ಲಿಸಬಹುದಾಗಿರುತ್ತದೆ ಮತ್ತು ಅದರ ಊರ್ಜಿತ ಅವಧಿಯು ಟೆಂಡರು ಊರ್ಜಿತ ಅವಧಿಗಿಂತ 45 ದಿನಗಳು ಹೆಚ್ಚಾಗಿ ಇರಬೇಕು.
4. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 24.8.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.
5. ಹೆಚ್ಚಿನ ವಿವರಗಳನ್ನು ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ಲಕ್ಷ ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಸೇರಿ) |
|---|---|---|---|---|
| | **ನಬಾರ್ಡ್ ಆರ್.ಐ.ಡಿ.ಎಫ್–14 (ರಸ್ತೆಗಳು)** | | | |
| 1 | ಮಂಗಳೂರು ತಾಲ್ಲೂಕಿನ ಪಡುಪಣಂಬೂರು ಚೆಲಿಯಾರು ಗ್ರಾಮದ ಸುಣ್ಣದಗೂಡು – ಕೆರೆಕಾಡು ರಸ್ತೆ ಅಭಿವೃದ್ಧಿ | 67.70 | 1.354 | 9 ತಿಂಗಳು |
| 2 | ಪುತ್ತೂರು ತಾಲ್ಲೂಕಿನ ಕುಡ್ಡುಪದವು – ಅಮ್ಮೈ ರಸ್ತೆ ಅಭಿವೃದ್ಧಿ | 100.00 | 2.00 | 12 ತಿಂಗಳು |
| 3 | ಪುತ್ತೂರು ತಾಲ್ಲೂಕಿನ ಇವಮಾಡು – ಪಾಲೆಪಡ್ಡಿ ಅಮ್ಮೈ ರಸ್ತೆ ಅಭಿವೃದ್ಧಿ | 69.00 | 1.38 | 9 ತಿಂಗಳು |
| 4 | ಸುಳ್ಯ ತಾಲ್ಲೂಕಿನ ನರಕೋಡು – ಕೊಲ್ಚಾರು – ಬಂಡ್ಯಡ್ಕ ರಸ್ತೆ ಅಭಿವೃದ್ಧಿ | 95.00 | 1.90 | 9 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್,
ಪಿ.ಆರ್. 611 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು.

## ನಿರ್ದೇಶಕರವರ ಕಛೇರಿ, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು–560 001

### ಟೆಂಡರು ಪ್ರಕಟಣೆ

**ಸಂಖ್ಯೆ: ಬಿಟಿಇ/02/ಇಎಫ್‌ಎಸ್/2009–10, ದಿನಾಂಕ: 16ನೇ ಜುಲೈ 2009**

ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆಯ ಪರೀಕ್ಷಾ ಮಂಡಳಿಗೆ ಸೆಮಿಸ್ಟರ್ ಡಿಪ್ಲೋಮಾ ಪರೀಕ್ಷೆಗಳನ್ನು ನಡೆಸಲು ಅಗತ್ಯವಾಗಿ ಬೇಕಾಗುವ 12 ಲಕ್ಷ ಮುಖ್ಯ ಉತ್ತರ ಪತ್ರಿಕೆ, 04 ಲಕ್ಷ ಹೆಚ್ಚುವರಿ ಮತ್ತು 07 ಲಕ್ಷ ಪ್ರಾಯೋಗಿಕ ಉತ್ತರ ಪತ್ರಿಕೆಗಳನ್ನು ಕಾಗದ ಒದಗಿಸಿಕೊಂಡು ಮುದ್ರಿಸಿ ಸರಬರಾಜು ಮಾಡಲು ಸಾಮರ್ಥ್ಯವಿರುವ ದೊಡ್ಡ ಪ್ರಮಾಣದ ಮುದ್ರಣ ವ್ಯವಸ್ಥೆ ಹೊಂದಿರುವ ಮುದ್ರಣಕಾರರಿಂದ ಕೆ.ಟಿ.ಟಿ.ಪಿ ಕಾಯ್ದೆಯನ್ವಯ ಮುಕ್ತ ಟೆಂಡರನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ಮುದ್ರಣಕಾರರು ರೂಪಾಯಿ 282.00ಗಳನ್ನು ನಿರ್ದೇಶನಾಲಯದ ನಗದು ವಿಭಾಗದಲ್ಲಿ ಪಾವತಿಸಿ ಪಡೆದ ರಶೀದಿ ಅಥವಾ ರಾಷ್ಟ್ರೀಕೃತ/ಷೆಡ್ಯೂಲ್ ಬ್ಯಾಂಕಿನಿಂದ ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ ಇವರ ಹೆಸರಿಗೆ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ನ್ನು ಈ ನಿರ್ದೇಶನಾಲಯದ, ಪರೀಕ್ಷಾ ಮಂಡಳಿಯ 5ನೇ ಮಹಡಿಯ ಕೊಠಡಿ ಸಂಖ್ಯೆ:503ರಲ್ಲಿ ಕೊಟ್ಟು ಅರ್ಜಿ ಹಾಗೂ ನಿಯಮ ನಿಬಂಧನೆಗಳನ್ನು ಪಡೆಯಬಹುದು. ಟೆಂಡರು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 17.08.2009 ಅಪರಾಹ್ನ 3.00 ಗಂಟೆ ಆಗಿರುತ್ತದೆ. ಅದೇ ದಿನ ಸಂಜೆ 4.00 ಗಂಟೆಗೆ ನಿರ್ದೇಶಕರ ಕೊಠಡಿಯಲ್ಲಿ ತೆರೆಯಲಾಗುವುದು. ಟೆಂಡರುದಾರರು ಅರ್ಜಿಯ ಜೊತೆ ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ ಇವರ ಹೆಸರಿಗೆ ಪಡೆದ ರೂ.50,000–00 ಮೊತ್ತದ ರಾಷ್ಟ್ರೀಕೃತ /ಷೆಡ್ಯೂಲ್ ಬ್ಯಾಂಕಿನ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಕಾರ್ಯದರ್ಶಿ ತಾಂತ್ರಿಕ ಪರೀಕ್ಷಾ ಮಂಡಳಿ, ಬೆಂಗಳೂರು–1, ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ನಿರ್ದೇಶಕರು
ಪಿ.ಆರ್. 608 ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ

**ನಿರ್ದೇಶಕರವರ ಕಛೇರಿ, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು–560 001**

**ಟೆಂಡರು ಪ್ರಕಟಣೆ**

**ಸಂಖ್ಯೆ: ಬಿಟಿಇ/03/ಇಎಫ್‌ಎಸ್/2009–10, ದಿನಾಂಕ: 21ನೇ ಜುಲೈ 2009**

ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆಯ ಪರೀಕ್ಷಾ ಮಂಡಳಿಗೆ ಸೆಮಿಸ್ಟರ್ ಡಿಪ್ಲೋಮಾ ಪರೀಕ್ಷೆಗಳನ್ನು ನಡೆಸಲು ಅಗತ್ಯವಾಗಿ ಬೇಕಾಗುವ ಡ್ರಾಯಿಂಗ್ ಹಾಳೆ, ಉತ್ತರ ಪತ್ರಿಕೆ ಕಳಿಸುವ, ಮತ್ತು 'ಡಿ'ಕೋಡಿಂಗ್ ಲಕೋಟೆ, ಮೇಣದ ಬತ್ತಿ, ಸ್ಟಾಪ್ಲರ್ ಪಿನ್ಸ್, ಕಾಟನ್ ಟ್ಯಾಗ್ಸ್, ರಿಸೋಗ್ರಾಫ್ ಪೇಪರ್, ತೆಳುಕಾಗದ, ಪೆನ್ಸಿಲ್ ಕಾರ್ಬನ್, ಪಿನ್ಸ್, ಇತ್ಯಾದಿ ಸಾಮಗ್ರಿಗಳನ್ನು ಸರಬರಾಜು ಮಾಡಲು ಸಾಮರ್ಥ್ಯವಿರುವ ಮುದ್ರಣಕಾರರಿಂದ/ವ್ಯಾಪಾರಸ್ಥರಿಂದ ಕೆ.ಟಿ.ಟಿ.ಪಿ ಕಾಯ್ದೆಯನ್ವಯ ಮುಕ್ತ ಟೆಂಡರನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ವ್ಯಾಪಾರಸ್ಥರು ರೂಪಾಯಿ 282.00ಗಳನ್ನು ನಿರ್ದೇಶನಾಲಯದ ನಗದು ವಿಭಾಗದಲ್ಲಿ ಪಾವತಿಸಿ ಪಡೆದ ರಶೀದಿ ಅಥವಾ ರಾಷ್ಟ್ರೀಕೃತ/ಷೆಡ್ಯೂಲ್ ಬ್ಯಾಂಕಿನಿಂದ ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ ಇವರ ಹೆಸರಿಗೆ ಪಡೆದ ಡಿಮ್ಯಾಂಡ್ ಡ್ರಾಫ್ಟ್‌ನ್ನು ಈ ಇಲಾಖೆಯ, ಪರೀಕ್ಷಾ ಮಂಡಳಿಯ 5ನೇ ಮಹಡಿಯ ಕೊಠಡಿ ಸಂಖ್ಯೆ:503ರಲ್ಲಿ ಕೊಟ್ಟು ಅರ್ಜಿ ಹಾಗೂ ನಿಯಮ ನಿಬಂಧನೆಗಳನ್ನು ಪಡೆಯಬಹುದು. ಟೆಂಡರು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 22.08.2009 ಅಪರಾಹ್ನ 3.00 ಗಂಟೆ ಆಗಿರುತ್ತದೆ. ಅದೇ ದಿನ ಸಂಜೆ 4.00 ಗಂಟೆಗೆ ನಿರ್ದೇಶಕರ ಕೊಠಡಿಯಲ್ಲಿ ತೆರೆಯಲಾಗುವುದು. ಟೆಂಡರುದಾರರು ಅರ್ಜಿಯ ಜೊತೆ ನಿರ್ದೇಶಕರು ತಾಂತ್ರಿಕ ಶಿಕ್ಷಣ ಇಲಾಖೆ ಇವರ ಹೆಸರಿಗೆ ಪಡೆದ ರೂ.10,000–00 ಮೊತ್ತದ ರಾಷ್ಟ್ರೀಕೃತ /ಷೆಡ್ಯೂಲ್ ಬ್ಯಾಂಕಿನ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ ಕಾರ್ಯದರ್ಶಿ ತಾಂತ್ರಿಕ ಪರೀಕ್ಷಾ ಮಂಡಳಿ, ಬೆಂಗಳೂರು–1, ಇವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಬಹುದು.

ನಿರ್ದೇಶಕರು

ಪಿ.ಆರ್. 609 ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ

**ನಿರ್ದೇಶಕರವರ ಕಛೇರಿ, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು–560 001**

**ಮರು ಟೆಂಡರು ಪ್ರಕಟಣೆ**

**ಸಂಖ್ಯೆ: ಬಿಟಿಇ/14/ಇಎಫ್‌ಎಸ್/2008, ದಿನಾಂಕ: 21ನೇ ಜುಲೈ 2009**

ತಾಂತ್ರಿಕ ಪರೀಕ್ಷಾ ಮಂಡಳಿ, ಬೆಂಗಳೂರು ಇವರು ಡಿಪ್ಲೋಮಾ ವಿದ್ಯಾರ್ಥಿಗಳಿಗೆ 'ವೆಬ್ ಎನೇಬ್ಲ್‌ಡ್ ಐಡಿ ಕಾರ್ಡ್' ಮತ್ತು 'ಸೆಕ್ಯೂರ್‌ಡ್ ಡಿಪ್ಲೋಮಾ ಪ್ರಮಾಣ ಪತ್ರ'ಗಳನ್ನು ನೀಡುವ ಸಲುವಾಗಿ ಮುಕ್ತ ಟೆಂಡರನ್ನು ಕರೆಯಲಾಗಿದ್ದು, ಈ ಬಗ್ಗೆ 5 ವರ್ಷಗಳ ಅನುಭವವಿರುವ ಆಸಕ್ತ ಸರಬರಾಜುದಾರರು/ವ್ಯಾಪಾರಸ್ಥರು ಟೆಂಡರಿನಲ್ಲಿ ಭಾಗವಹಿಸುವಂತೆ ಕೋರಲಾಗಿದೆ. ಟೆಂಡರು ಅರ್ಜಿಯ ಬೆಲೆ ರೂಪಾಯಿ 282.00ನ್ನು ನಗದಾಗಿ ಇಲಾಖೆಯ ನಗದು ವಿಭಾಗದಲ್ಲಿ ಪಾವತಿಸಿ ಪಡೆದ ರಶೀದಿ ಅಥವಾ ರಾಷ್ಟ್ರೀಕೃತ ಬ್ಯಾಂಕ್‌ನಿಂದ ನಿರ್ದೇಶಕರ ಹೆಸರಿಗೆ ತೆಗೆದ ಡಿ.ಡಿಯನ್ನು ಕಾರ್ಯದರ್ಶಿ, ತಾಂತ್ರಿಕ ಪರೀಕ್ಷಾ ಮಂಡಳಿಯ ಕೊಠಡಿ ಸಂಖ್ಯೆ 503 ರಲ್ಲಿ ಕೊಟ್ಟು ಅರ್ಜಿ ಹಾಗೂ ಟೆಂಡರಿನ ನಿಯಮ ನಿಬಂಧನೆಗಳನ್ನು ಪಡೆಯಬಹುದು. ಟೆಂಡರು ಅರ್ಜಿ ಸಲ್ಲಿಸಲು ದಿನಾಂಕವನ್ನು 22.08.2009 ಅಪರಾಹ್ನ 2.00 ಗಂಟೆಯವರೆಗೆ ವಿಸ್ತರಿಸಲಾಗಿದೆ. ಟೆಂಡರಿನ ಜೊತೆಯಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಿಂದ ನಿರ್ದೇಶಕರ ಹೆಸರಿಗೆ ತೆಗೆದ ರೂ.01.00 ಲಕ್ಷ ಮೊತ್ತದ ಡಿ.ಡಿ.ಯನ್ನು ಲಗತ್ತಿಸಬೇಕು. ಹೆಚ್ಚಿನ ವಿವರಗಳಿಗೆ, ಕಾರ್ಯದರ್ಶಿ, ತಾಂತ್ರಿಕ ಪರೀಕ್ಷಾ ಮಂಡಳಿಯವರ ಕಛೇರಿಯನ್ನು ಸಂಪರ್ಕಿಸಬಹುದು.

ನಿರ್ದೇಶಕರು

ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ

**Office of the Director, Department of Technical Education, Tantrika Bhavan, Palace Road, Bengaluru-560001**

**Re-Tender Notification**

**No.BTE/14/EFS/2008, Dated: 21st July 2009**

Sealed re-tenders are invited for printing & supply of Secured Diploma Certificates and supply of web enabled ID Cards for Diploma Students in Karnataka State. The applications are available in this office. The cost of the tender application is Rs.250+12.5% tax payable at the cash counter of the department or any Nationalised banks Demand Draft. The tender application forms should be submitted with an EMD of Rs.01 lakh payable at any Nationalised Bank in Karnataka, drawn in favour of Director, Department of Technical Education, Palace Road, Bengaluru-560001. The filled and sealed tender application forms along with samples of the material used for above said items and EMD DD should sent to the Secretary, Board of Technical Examinations, Palace Road, Bengaluru-560001. The last date for submitting the filled tender applications is extended up to 22.08.2009 at 2.00 P.M.

DIRECTOR

P.R. 610 Department of Technical Education, Palace Road, Bengaluru-1

**ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ**

**ಅಧಿಸೂಚನೆ ಸಂಖ್ಯೆ: ADMN-I/ 4055/2009, ದಿನಾಂಕ: 18ನೇ ಜುಲೈ 2009.**

**ವಿಷಯ:** ಬೆರಳಚ್ಚುಗಾರ–ನಕಲುಗಾರ / ಆದೇಶಿಕ ಜಾರಿಕಾರ ಮತ್ತು ಜವಾನ ಹುದ್ದೆಗಳ ನೇಮಕಾತಿ ಬಗ್ಗೆ.

**ಓದಲಾಗಿದೆ:** (1) ಉಚ್ಛ ನ್ಯಾಯಾಲಯದ ಪತ್ರ ಸಂಖ್ಯೆ: LCA-II/205/2004, ದಿನಾಂಕ: 17.06.2009

(2) ಸರ್ಕಾರಿ ಆದೇಶ ಸಂಖ್ಯೆ LAW:32 LCE 2008 ದಿನಾಂಕ: 23.04.2008

(3) ಸರ್ಕಾರಿ ಅಧಿಸೂಚನೆ ಸಂಖ್ಯೆ: LAW 01 LAC–2008, ದಿನಾಂಕ:13–02–2008.

**ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 20.08.2009 ಸಂಜೆ 5–00 ಘಂಟೆ.**

**ಅರ್ಜಿ ಸಲ್ಲಿಸಬೇಕಾದ ವಿಳಾಸ:–** ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ನ್ಯಾಯಾಲಯ, ಉಡುಪಿ ಜಿಲ್ಲೆ, ಉಡುಪಿ.

**ಭಾಗ–1:**

**(I) ಬೆರಳಚ್ಚುಗಾರ–ನಕಲುಗಾರ: (TYPIST-COPYIST):**

I. ಹುದ್ದೆಗಳ ಸಂಖ್ಯೆ : 1

II. ಹುದ್ದೆಯ ವರ್ಗೀಕರಣ: ಸಾಮಾನ್ಯ ಗ್ರಾಮೀಣ ಅಭ್ಯರ್ಥಿ

III. **ವೇತನ ಶ್ರೇಣಿಃ–** 5800–100–6000–125–6500–150–7100–175–7800–200–8600–225–9500–250–10500– ಇತರ ಭತ್ಯೆಗಳೊಂದಿಗೆ.

**IV. ಶೈಕ್ಷಣಿಕ ವಿದ್ಯಾರ್ಹತೆಃ–**

(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

(2) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**V. ಅರ್ಹತಾ ಪರೀಕ್ಷೆ:**

(1) ಅಭ್ಯರ್ಥಿಗೆ 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು.

**(II) ಆದೇಶಿಕ ಜಾರಿಕಾರ (PROCESS-SERVER):**

**I. ಹುದ್ದೆಗಳ ಸಂಖ್ಯೆ : 1**

II. ಹುದ್ದೆಯ ವರ್ಗೀಕರಣ ಸಾಮಾನ್ಯ ಮಹಿಳಾ ಅಭ್ಯರ್ಥಿ

**III. ವೇತನ ಶ್ರೇಣಿಃ– 5200–100–6000–125–6500–150–7100–175–7800–200–8200**

**IV. ಶೈಕ್ಷಣಿಕ ವಿದ್ಯಾರ್ಹತೆಃ–**

(1) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

(2) ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಆಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**(III) ಜವಾನ (PEON):**

**I. ಹುದ್ದೆಗಳ ಸಂಖ್ಯೆ : 1**

**II. ಹುದ್ದೆಯ ವರ್ಗೀಕರಣ: ಸಾಮಾನ್ಯ ಗ್ರಾಮೀಣ ಅಭ್ಯರ್ಥಿ**

**III. ವೇತನ ಶ್ರೇಣಿಃ– 4800–100–6000–125–6500–150–7100–175–7275.**

**IV. ಶೈಕ್ಷಣಿಕ ವಿದ್ಯಾರ್ಹತೆಃ–**

(1) ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

(2) ಕನ್ನಡ ಓದಲು ಬರೆಯಲು ತಿಳಿದಿರಬೇಕು.

**ಭಾಗ–2ಃ–**

(1) ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗ್ತೀಕರಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು.

(2) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು.

(3) ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.

(4) ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರ ಪ್ರಮಾಣ ಪತ್ರಗಳ ಪ್ರತಿಗಳನ್ನು ಸ್ವಯಂ ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗ್ತೀಕರಿಸುವ ಅವಶ್ಯಕತೆ ಇರುವುದಿಲ್ಲ. ಲಗ್ತೀಕರಿಸಿದ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು.

(5) ಅಭ್ಯರ್ಥಿಗಳು ಅರ್ಜಿಯೊಂದಿಗೆ ಕೊನೆಯಲ್ಲಿ ವ್ಯಾಸಂಗ ಮಾಡಿದ ಶಾಲೆ ಅಥವಾ ವಿದ್ಯಾಲಯದಿಂದ ಪಡೆದ ನಡತೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ಪ್ರತಿಯನ್ನು ಲಗ್ತೀಕರಿಸತಕ್ಕದ್ದು.

(6) ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಶೀಲದ ಬಗ್ಗೆ ತಮ್ಮ ಸಂಬಂಧಿಯಲ್ಲದ ಸಮಾಜದ ಇಬ್ಬರು ಗಣ್ಯ ವ್ಯಕ್ತಿಗಳಿಂದ (ಹಿಂದೆ ಕಲಿತ ಶಾಲಾ ಅಥವಾ ಕಾಲೇಜು ಮುಖ್ಯಸ್ಥರನ್ನು ಹೊರತುಪಡಿಸಿ) ಅರ್ಜಿ ಸಲ್ಲಿಸುವ ದಿನಾಂಕದ ಆರು ತಿಂಗಳ ಒಳಗೆ ಪಡೆದ ಎರಡು ಪ್ರಮಾಣ ಪತ್ರಗಳನ್ನು ಲಗ್ತೀಕರಿಸತಕ್ಕದ್ದು. (ಗಣ್ಯ ವ್ಯಕ್ತಿಗಳ ರುಜುವಿನಡಿಯಲ್ಲಿ ಹೆಸರು ಮತ್ತು ಮೊಹರು ಕಡ್ಡಾಯವಾಗಿ ಇರತಕ್ಕದ್ದು).

**(7) ವಯೋಮಿತಿಃ–**

(ಅ) ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ಆಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

(ಆ) **ಗರಿಷ್ಟ ವಯೋಮಿತಿಃ–** ಸಾಮಾನ್ಯ ವರ್ಗ ಃ 35 ವರ್ಷಗಳು .
2ಎ, 2ಬಿ , 3ಎ, 3ಬಿ ಃ 38 ವರ್ಷಗಳು.
ಪರಿಶಿಷ್ಟಜಾತಿ : ಪರಿಶಿಷ್ಟಪಂಗಡ : ಪ್ರವರ್ಗ–1 ಃ 40 ವರ್ಷಗಳು.

(ಇ) ಮಾಜಿ ಸೈನಿಕರಿಗೆ ಗರಿಷ್ಟ ವಯೋಮಿತಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳು ಆಗುವುದೋ ಅಷ್ಟು ವರ್ಷಗಳ ಸಡಿಲಿಕೆ.

(ಈ) ವಿಧವೆಯರಿಗೆ ಮತ್ತು ಅಂಗವಿಕಲರಿಗೆ ಹತ್ತು ವರ್ಷಗಳ ಸಡಿಲಿಕೆ.

(ಉ) ಹುಟ್ಟಿದ ದಿನಾಂಕವನ್ನು ತೋರಿಸುವ ಬಗ್ಗೆ ದೃಢೀಕರಿಸಿದ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**(8) ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಕೋರಿದಲ್ಲಿ ಹಾಜರುಪಡಿಸಬೇಕಾದ ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳುಃ–**

(ಅ) ಸೈನಿಕ ಸೇವೆಯಿಂದ ಬಿಡುಗಡೆಯಾದ ಃ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ.

(ಆ) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ.

(ಇ) ಅಂಗವಿಕಲ ಅಭ್ಯರ್ಥಿಗಳು ನಿಗದಿ ಪಡಿಸಿದ ನಮೂನೆಯಲ್ಲಿ ಪಡೆದ ವೈದ್ಯಕೀಯ ಪ್ರಮಾಣ ಪತ್ರ.

(ಈ) ವಿಧವೆಯರು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ.

**(9) ಆಯ್ಕೆ ವಿಧಾನಃ–**

(ಅ) ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮ 2007 ರ ಪ್ರಕಾರ ನಡೆಸಲಾಗುವುದು.

(ಆ) ಸಾಮಾನ್ಯ ವರ್ಗಗಳ ಮಹಿಳಾ ಅಥವಾ ಗ್ರಾಮೀಣ ಮೀಸಲಾತಿ ಇರುವ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದ ಪಕ್ಷದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳಿಂದ ತುಂಬಿಕೊಳ್ಳಲಾಗುವುದು.

**(10) ಅಭ್ಯರ್ಥಿಗಳಿಗೆ ಸೂಚನೆಃ–**

(ಅ) ಆಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.

(ಆ) ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(ಇ) ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಸಮುಚ್ಛಿತ ಮಾರ್ಗದ ಮುಖಾಂತರ ಸಲ್ಲಿಸಬೇಕು.

(ಈ) ಅಭ್ಯರ್ಥಿಗಳು ತಮ್ಮ ಅರ್ಜಿಯ ಜೊತೆ 5–00 ರೂ.ಗಳ ಸ್ಟಾಂಪು ಲಗತ್ತಿಸಿರುವ ಸ್ವವಿಳಾಸವಿರುವ ಲಕೋಟೆಯನ್ನು ಲಗತ್ತಿಸಿರಬೇಕು.

(ಉ) ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ನಮೂದಿಸಿರಬೇಕು.

(ಊ) ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಸಂದರ್ಶನಕ್ಕೆ ಹಾಜರಾಗುವುದು.

(ಋ) ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಯಾವುದೇ ಪತ್ರ ವ್ಯವಹಾರಗಳನ್ನು ನಡೆಸಲಾಗುವುದಿಲ್ಲ.

ಜಿಲ್ಲಾ ನ್ಯಾಯಾಧೀಶರು,
ಉಡುಪಿ.

**ಅರ್ಜಿ ನಮೂನೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಉಡುಪಿ ಜಿಲ್ಲೆ, ಉಡುಪಿ – ಇವರಿಗೆ.

**ಭಾವಚಿತ್ರ**

**ಮಾನ್ಯರೇ,**

ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ ಎಡಿಎಂಎನ್–1/4055/2009 ದಿನಾಂಕ: 18.07.2009ರ ಪ್ರಕಾರ ಬೆರಳಚ್ಚುಗಾರ–ನಕಲುಗಾರ ಹುದ್ದೆಗೆ ನಾನು ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | |
|---|---|---|
| 1. | ಅಭ್ಯರ್ಥಿಯ ಹೆಸರು | |
| 2. | ತಂದೆಯ/ತಾಯಿಯ/ಗಂಡನ ಹೆಸರು | |
| 3. | ಪೂರ್ಣ ವಿಳಾಸ | |
| 4. | ವಯಸ್ಸು ಮತ್ತು ಜನ್ಮ ದಿನಾಂಕ | |
| 5. | ಲಿಂಗ | ಪುರುಷ / ಮಹಿಳೆ |
| 6. | ರಾಷ್ಟ್ರೀಯತೆ :<br>ಮತ :<br>ಜಾತಿ/ಉಪಜಾತಿ : | |
| 7. | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳುಃ– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | |

| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೋಂದಣಿ ಸಂಖ್ಯೆ. | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡ ವಾರು ಅಂಕಗಳು |
|---|---|---|---|---|---|
| ಎ. | ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆ | | | | |
| ಬಿ. | ಕಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಸಿ. | ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ. | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |

| | | |
|---|---|---|
| 8. | ಗ್ರಾಮೀಣ ಮೀಸಲಾತಿ ಮತ್ತು ವಯೋಮಿತಿ ಸಡಿಲಿಕೆ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ಪ್ರತಿಗಳನ್ನು ಲಗತ್ತಿಸಿರುವ ಬಗ್ಗೆ ವಿವರಗಳು. | |
| 9. | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರು ವಿವರಗಳು | |

**ಸೂಚನೆ:–** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕತಕ್ಕದ್ದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ /ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಉಡುಪಿ ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ಸಿದ್ಧಳಿದ್ದೇನೆ.

ಸ್ಥಳ :

ದಿನಾಂಕ:

ಅಭ್ಯರ್ಥಿಯ ಸಹಿ.

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ/ ಶ್ರೀಮತಿ.............................................................................................. ಇವರು ನಮ್ಮ ಇಲಾಖೆಯಲ್ಲಿ ದಿನಾಂಕಃ ರಿಂದ ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು ................................ ಹುದ್ದೆಗೆ ಅರ್ಹರಿರುತ್ತಾರೆ ಮತ್ತು .................ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ : ಸಹಿ ಃ

ಪದನಾಮ ಃ

ದಿನಾಂಕ : ಕಛೇರಿಯ ಮೊಹರು ಃ

**ಅರ್ಜಿ ನಮೂನೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಉಡುಪಿ ಜಿಲ್ಲೆ , ಉಡುಪಿ – ಇವರಿಗೆ.

**ಭಾವಚಿತ್ರ**

ಮಾನ್ಯರೇ,

ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ ಎಡಿಎಂಎನ್–1/4055/2009, ದಿನಾಂಕ:18.07.2009ರ ಪ್ರಕಾರ ಆದೇಶಿಕ ಜಾರಿಕಾರ /ಜವಾನ ಹುದ್ದೆಗೆ ನಾನು ಈ ಮೂಲಕ ನನ್ನ ವಿವರಗಳೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | |
|---|---|---|
| 1. | ಅಭ್ಯರ್ಥಿಯ ಹೆಸರು | |
| 2. | ತಂದೆಯ/ತಾಯಿಯ/ಗಂಡನ ಹೆಸರು | |
| 3. | ಪೂರ್ಣ ವಿಳಾಸ | |
| 4. | ವಯಸ್ಸು ಮತ್ತು ಜನ್ಮ ದಿನಾಂಕ | |

| | | | | | |
|---|---|---|---|---|---|
| 5. | ಲಿಂಗ | ಪುರುಷ / ಮಹಿಳೆ | | | |
| 6. | ರಾಷ್ಟ್ರೀಯತೆ :<br>ಮತ :<br>ಜಾತಿ/ಉಪಜಾತಿ : | | | | |
| 7. | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು:– (ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೋಂದಣಿ ಸಂಖ್ಯೆ. | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡ ವಾರು ಅಂಕಗಳು |
| ಎ. | ಏಳನೇ ತರಗತಿ ಪರೀಕ್ಷೆ (ಜವಾನ ಹುದ್ದೆಗೆ) | | | | |
| ಬಿ. | ಎಸ್.ಎಸ್.ಎಲ್.ಸಿ./ತತ್ಸಮಾನ (ಆದೇಶಿಕ ಜಾರಿಕಾರ ಹುದ್ದೆಗೆ) | | | | |
| ಸಿ. | ಇತರೆ ವಿದ್ಯಾರ್ಹತೆಗಳು ಇದ್ದಲ್ಲಿ | | | | |
| 8. | ಗ್ರಾಮೀಣ ಮೀಸಲಾತಿ ಮತ್ತು ವಯೋಮಿತಿ ಸಡಿಲಿಕೆ ಸೌಲಭ್ಯ ಪಡೆಯ ಬಯಸುವ ಅಭ್ಯರ್ಥಿಗಳು ಸಂಬಂಧಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ಪ್ರತಿಗಳನ್ನು ಲಗತ್ತಿಸಿರುವ ಬಗ್ಗೆ ವಿವರಗಳು. | | | | |
| 9. | ಅರ್ಜಿದಾರರು ವಾಹನ ಚಾಲನೆಯ ಲೈಸೆನ್ಸ್ ಹೊಂದಿರುವರೇ? (ಆದೇಶಿಕ ಜಾರಿಕಾರ ಹುದ್ದೆಗೆ ಮಾತ್ರ) | | | | |
| 10 | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರು ವಿವರಗಳು | | | | |

**ಸೂಚನೆ:–** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು ಹೊಡೆದು ಹಾಕುವುದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ /ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಉಡುಪಿ ಜಿಲ್ಲಾ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ/ಸಿದ್ಧಳಿದ್ದೇನೆ.

ಸ್ಥಳ :

ದಿನಾಂಕ: ಅಭ್ಯರ್ಥಿಯ ಸಹಿ.

**ಅಭ್ಯರ್ಥಿಯು ಸರ್ಕಾರಿ ನೌಕರನಾಗಿದ್ದ ಪಕ್ಷದಲ್ಲಿ ನೇಮಕಾತಿ ಪ್ರಾಧಿಕಾರಗಳ ದೃಢೀಕರಣ ಪತ್ರ**

ಶ್ರೀ/ ಶ್ರೀಮತಿ.......................................................................................................... ಇವರು ನಮ್ಮ ಇಲಾಖೆಯಲ್ಲಿ ದಿನಾಂಕ: ರಿಂದ ರ ವರೆಗೆ ಸೇವೆ ಸಲ್ಲಿಸುತ್ತಿದ್ದು ಅಭ್ಯರ್ಥಿಯ ನಡತೆಯು ಉತ್ತಮವಾಗಿದ್ದು ......................................... ಹುದ್ದೆಗೆ ಅರ್ಹರಿರುತ್ತಾರೆ ಮತ್ತು .........................................ಹುದ್ದೆಗೆ ಅರ್ಜಿ ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ : ಸಹಿ :

ಪದನಾಮ :

ದಿನಾಂಕ : ಕಛೇರಿಯ ಮೊಹರು :

**ಅಧಿಸೂಚನೆಯ ಸಂಕ್ಷಿಪ್ತರೂಪ**

**ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉಡುಪಿ**

ಸಂಖ್ಯೆ: ADMN-I/4055/2009, ದಿನಾಂಕ: 18.07.2009

ಉಡುಪಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಘಟಕದಲ್ಲಿ, ಈ ಕೆಳಗೆ ನಮೂದಿಸಿರುವ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಕೆಳಗೆ ತೋರಿಸಿದ ನಮೂನೆಗಳಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ದಾಖಲಾತಿಗಳೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ:20.08.2009.

ಹುದ್ದೆಗಳ ಹೆಸರು, ಸಂಖ್ಯೆ ಮತ್ತು ಮೀಸಲಾತಿಯ ವಿವರ: 1. ಬೆರಳಚ್ಚುಗಾರ–ನಕಲುಗಾರ–(1) ಸಾಮಾನ್ಯ ಗ್ರಾಮೀಣ 2. ಆದೇಶಿಕ ಜ್ಯಾರಿಕಾರ–(1) ಸಾಮಾನ್ಯ ಮಹಿಳೆ 3. ಜವಾನ – (1) ಸಾಮಾನ್ಯ ಗ್ರಾಮೀಣ

**ಶೈಕ್ಷಣಿಕ ವಿದ್ಯಾರ್ಹತೆ:**

1. ಬೆಳಚ್ಚು–ನಕಲುಗಾರ: 1. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ. 2. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕಿರಿಯ ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ. 2. ಪ್ರೋಸೆಸ್ ಸರ್ವರ್: 1. ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ. 2. ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು. 3. ಜವಾನರು: 1. ಏಳನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು. 2. ಕನ್ನಡ ಓದಲು ಬರೆಯಲು ತಿಳಿದಿರಬೇಕು.

**ವಯೋಮಿತಿ:** ಅರ್ಜಿಗಳನ್ನು ಸ್ವೀಕರಿಸಲು ನಿಗದಿ ಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು. ಗರಿಷ್ಠ ವಯೋಮಿತಿ:– ಸಾಮಾನ್ಯ ವರ್ಗ : 36 ವರ್ಷಗಳು, ಪ್ರವರ್ಗ–2ಎ, 2ಬಿ, 3ಎ, 3ಬಿ : 38 ವರ್ಷಗಳು, ಪರಿಶಿಷ್ಟ ಜಾತಿ:ಪರಿಶಿಷ್ಟ ಪಂಗಡ:ಪ್ರವರ್ಗ–1 : 40 ವರ್ಷಗಳು, ಮಾಜಿ ಸೈನಿಕರಿಗೆ ಗರಿಷ್ಠ ವಯೋಮಿತಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳು ಆಗುವುದೋ ಅಷ್ಟು ವರ್ಷಗಳ ಸಡಿಲಿಕೆ, ವಿಧವೆಯರಿಗೆ ಮತ್ತು ಅಂಗವಿಕಲರಿಗೆ ಹತ್ತು ವರ್ಷಗಳ ಸಡಿಲಿಕೆ,

**ಅರ್ಹತಾ ಪರೀಕ್ಷೆ:** ಬೆರಳಚ್ಚು–ನಕಲುಗಾರರಿಗೆ: 15 ನಿಮಿಷಗಳ ಅವಧಿಯಂತೆ ಎರಡೂ ಭಾಷೆಗಳಲ್ಲಿ ಬೆರಳಚ್ಚು ಮಾಡಲು ಉಕ್ತಲೇಖನ ನೀಡಲಾಗುವುದು. ಆಯ್ಕೆಯ ವಿಧಾನ: ಅಭ್ಯರ್ಥಿಗಳ ಆಯ್ಕೆಯು ಕರ್ನಾಟಕ ಅಧೀನ ನ್ಯಾಯಾಲಯಗಳ (ಲಿಪಿಕ ಮತ್ತು ಇತರ ಹುದ್ದೆಗಳ) (ನೇಮಕಾತಿ) (ತಿದ್ದುಪಡಿ) ನಿಯಮ 2007ರ ಪ್ರಕಾರ ನಡೆಸಲಾಗುವುದು. ನಿಗದಿತ ಅರ್ಜಿ ನಮೂನೆಗಳನ್ನು ಜಿಲ್ಲಾ ನ್ಯಾಯಾಲಯದ ಕುಂದಾಪುರ ಹಾಗೂ ಕಾರ್ಕಳ ಹಿರಿಯ ಸಿವಿಲ್ ನ್ಯಾಯಾಲಯಗಳ ಹಾಗೂ ಎಲ್ಲಾ ಜಿಲ್ಲಾ ನ್ಯಾಯಾಲಯಗಳ ಸೂಚನಾ ಫಲಕಗಳಲ್ಲಿ ಪ್ರಕಟಿಸಲಾಗಿದೆ. ಹೆಚ್ಚಿನ ಮಾಹಿತಿಗಾಗಿ ಜಿಲ್ಲಾ ನ್ಯಾಯಾಧೀಶರ ಕಚೇರಿಯನ್ನು ಸಂಪರ್ಕಿಸಬಹುದಾಗಿದೆ. ಅರ್ಜಿಗಳು ನಿಗದಿತ ನಮೂನೆಯಲ್ಲಿ ಇಲ್ಲದಿದ್ದ ಪಕ್ಷದಲ್ಲಿ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

ಪಿ.ಆರ್. 612 ಜಿಲ್ಲಾ ನ್ಯಾಯಾಧೀಶರು, ಉಡುಪಿ.

**ಆಡಳಿತಾಧಿಕಾರಿಗಳ ಕಛೇರಿ**

**ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯ ಕೋಶ) ನಂ.8, 4ನೇ ಮಹಡಿ,**

**ಎಂ.ಎಫ್. ಬಿಲ್ಡಿಂಗ್–II, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು – 560 052**

**ಅಧಿಸೂಚನೆ ಸಂಖ್ಯೆ: ಎಸ್–1/ಎನ್.ಸಿ.ಇ–180/ಎಪಿಪಿಟಿ.ಡ್ರೈವರ್ಸ್/2008, ಬೆಂಗಳೂರು, ದಿನಾಂಕ: 22ನೇ ಜುಲೈ 2009**

1. **ಚಾಲಕರ ಹುದ್ದೆಗಳಿಗಾಗಿ ನೇಮಕಾತಿ**

   **ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 21.08.2009**

   ಈ ಇಲಾಖೆಯಲ್ಲಿ ಖಾಲಿಯಿರುವ 36 ಚಾಲಕರ ಹುದ್ದೆಗಳಿಗಾಗಿ ಅರ್ಜಿ ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

2. ಈ ಇಲಾಖೆಯ ಸರ್ಕಾರಿ ಅಧಿಸೂಚನೆ ಸಂಖ್ಯೆ. ಇಡಿ.23.ರಾಯುಸೇ.2001 ದಿನಾಂಕ:04.08.2003ರಲ್ಲಿ ಪ್ರಕಟಿತವಾದ ಈ ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ತಿಳಿಸಿದ ಅರ್ಹತೆಯುಳ್ಳ ಅಭ್ಯರ್ಥಿಗಳನ್ನು ಕಾಲಕಾಲಕ್ಕೆ ಆದ ತಿದ್ದುಪಡಿಗಳನ್ನೊಳಗೊಂಡಂತೆ ಸರ್ಕಾರಿ ಅಧಿಸೂಚನೆ ಸಂಖ್ಯೆ. DPAR 19 SCR 2006 ದಿನಾಂಕ 14.08.2006 ರಲ್ಲಿ ಹೊರಡಿಸಿದ ಕರ್ನಾಟಕ ನಾಗರೀಕ ಸೇವಾ (ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಆಯ್ಕೆ ಮುಖಾಂತರ ಮಾಡಲಾಗುವ ನೇರ ನೇಮಕಾತಿ) (ಸಾಮಾನ್ಯ) ನಿಯಮಗಳು, 2006 ರಲ್ಲಿ ವಾಹನ

ಚಾಲಕರ ನೇಮಕಾತಿ ಕುರಿತಂತೆ ವಿವರಿಸಿದ ರೀತಿಯಲ್ಲಿ ಮೆರಿಟ್ ಆಧರಿಸಿ ಆಯ್ಕೆ ಮಾಡಲಾಗುವುದು. ಆಯ್ಕೆ ಕುರಿತಂತೆ ಯಾವುದೇ ಪ್ರಭಾವ ಬೀರಲು ಯತ್ನಿಸುವವರ ಅಭ್ಯರ್ಥಿತನವನ್ನು ಅನರ್ಹಗೊಳಿಸಲಾಗುವುದು.

3. ವೇತನ ಶ್ರೇಣಿ: ರೂ.5800–100–6000–125–6500–150–7100–175–7800–200–8600–225–9500–250–10500 + ರೂ.90/– ವಿಶೇಷ ವೇತನ ಮತ್ತು ಕಾಲಕಾಲಕ್ಕೆ ಲಭ್ಯವಾಗುವ ಭತ್ಯೆಗಳು.

4. ಹುದ್ದೆಗಳ ವರ್ಗೀಕರಣ:

| ವರ್ಗ | ಇತರೆ | ಮಹಿಳಾ | ಗ್ರಾಮೀಣ | ಮಾಜಿ ಸೈನಿಕರು | ಕನ್ನಡ ಮಾಧ್ಯಮ | ಯೋಜನೆಗಳಿಂದ ನಿರಾಶ್ರಿಗೊಂಡವ | ಒಟ್ಟು |
|---|---|---|---|---|---|---|---|
| ಸಾಮಾನ್ಯ | 04 | 06 | 05 | 01 | 01 | 01 | 18 |
| ಪರಿಶಿಷ್ಟ ಜಾತಿ | 02 | 02 | 02 | – | – | – | 06 |
| ಪರಿಶಿಷ್ಟ ಪಂಗಡ | 01 | | | | | | 01 |
| ಪ್ರವರ್ಗ–1 | 01 | | | | | | 01 |
| ಪ್ರವರ್ಗ–2 ಎ | 03 | 02 | 02 | – | – | – | 07 |
| ಪ್ರವರ್ಗ–2 ಬಿ | 01 | – | – | – | – | – | 01 |
| ಪ್ರವರ್ಗ–3 ಎ | 01 | – | – | – | – | – | 01 |
| ಪ್ರವರ್ಗ–3 ಬಿ | 01 | – | – | – | – | – | 01 |
| **ಒಟ್ಟು** | **14** | **10** | **09** | **01** | **01** | **01** | **36** |

**ಸೂಚನೆ:** ಸಮತಳ ಮೀಸಲಾತಿಯಲ್ಲಿನ ವಿವಿಧ ಗುಂಪುಗಳಿಗೆ ಮೀಸಲಿರಿಸಿದ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಹುದ್ದೆಗಳನ್ನು ಅದೇ ಗುಂಪಿನ ಇತರೆ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಮೇಲಿನ ವರ್ಗೀಕರಣವನ್ನು ಸರ್ಕಾರಿ ಆದೇಶ ಸಂಖ್ಯೆ ಡಿ.ಪಿ.ಎ.ಆರ್.08.ಎಸ್.ಆರ್.ಎಸ್. 95 ದಿನಾಂಕ: 20.06.2003 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಡಿ.ಪಿ.ಎ.ಆರ್. 97 ಎಸ್.ಆರ್.ಎಸ್. 2002 ದಿನಾಂಕ: 22.11.2002 ರಲ್ಲಿ ಸೂಚಿಸಿದ ವಿಧಾನದಲ್ಲಿ ಮಾಡಲಾಗಿದೆ.

5. ಪರೀಕ್ಷಾರ್ಥ ಅವಧಿ: ಆಯ್ಕೆಯಾದ ಅಭ್ಯರ್ಥಿಗಳು 02 ವರ್ಷಗಳು ಪರೀಕ್ಷಾರ್ಥ ಅವಧಿಯಲ್ಲಿರುತ್ತಾರೆ

6. ವಿದ್ಯಾರ್ಹತೆ : (i) 8ನೇ ತರಗತಿಯಲ್ಲಿ ಉತ್ತೀರ್ಣ
   (ii) ವಾಹನ ಚಾಲನೆಯಲ್ಲಿ ಸಕ್ಷಮ ಪ್ರಾಧಿಕಾರವು ನೀಡಿರುವ "ಲೈಸನ್ಸ್" (Motor Vehicle Licence) ಹೊಂದಿರಬೇಕು.

7. ವಯೋಮಿತಿ : ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆ ದಿನಾಂಕದಂದು 18 ವರ್ಷಗಳು ಪೂರೈಸಿರಬೇಕು /ದಾಟಿರಬೇಕು ಮತ್ತು
   (ಎ) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಅಥವಾ ಪ್ರವರ್ಗ–1 ಅಭ್ಯರ್ಥಿಗಳಿಂದ 40 ವರ್ಷಗಳು ದಾಟಿರಬಾರದು.
   (ಬಿ) ಪ್ರವರ್ಗ–2 ಎ, ಪ್ರವರ್ಗ–2 ಬಿ, ಪ್ರವರ್ಗ–3 ಎ, ಪ್ರವರ್ಗ–3 ಬಿ ಈ ವರ್ಗಗಳಿಗೆ ಸಂಬಂಧಪಟ್ಟ ಅಭ್ಯರ್ಥಿಗಳು 38 ವರ್ಷಗಳು ದಾಟಿರಬಾರದು.
   (ಸಿ) ಉಳಿದ ಅಭ್ಯರ್ಥಿಗಳು 35 ವರ್ಷಗಳು ಮೀರಿರಬಾರದು.
   (ಡಿ) ಮಾಜಿ ಸೈನಿಕರಿಗೆ ವಯೋಮಿತಿಯಲ್ಲಿ ನಿಯಮಾನುಸಾರ ಸಡಿಲಿಕೆ ನೀಡಲಾಗುವುದು.

8. ಡ್ರೈವಿಂಗ್ ಪರೀಕ್ಷೆಗಾಗಿ ಕರೆಯಲಾಗುವ ಅಭ್ಯರ್ಥಿಗಳು ಅವರ ಸ್ವಂತ ಖರ್ಚಿನಲ್ಲಿ ಪರೀಕ್ಷೆ ತೆಗೆದುಕೊಳ್ಳುವ/ ಮಾಡಲಾಗುವ ಸ್ಥಳದಲ್ಲಿ ಹಾಜರಾಗತಕ್ಕದ್ದು.

9. ಅರ್ಜಿ ಶುಲ್ಕ ರೂ.5–00 ಗಳನ್ನು ನಿಗದಿಪಡಿಸಲಾಗಿದ್ದು, ಇದನ್ನು ಕ್ರಾಸ್ ಮಾಡಿದ Indian Postal Order (purchased not earlier than 15 days prior to the date of application payable to the appointing authority) ಮುಖಾಂತರ ಆಡಳಿತಾಧಿಕಾರಿಗಳು, ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯಕೋಶ), ಬೆಂಗಳೂರು ಇವರ ಹೆಸರಿನಲ್ಲಿ ತೆಗೆದು ಅರ್ಜಿ ಜೊತೆಗೆ ಲಗತ್ತಿಸಿ ಸಲ್ಲಿಸತಕ್ಕದ್ದು.
   ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಅಥವಾ ಪ್ರವರ್ಗ–1ಕ್ಕೆ ಸಂಬಂಧ ಪಟ್ಟ ಅಭ್ಯರ್ಥಿಗಳು ಅರ್ಜಿಯ ಶುಲ್ಕ ನೀಡುವ ಅಗತ್ಯವಿರುವುದಿಲ್ಲ.

10. ನಿಗದಿತ ನಮೂನೆಯಲ್ಲಿ ಪೂರ್ಣ ಭರ್ತಿ ಮಾಡಿದ ಅರ್ಜಿಗಳನ್ನು ವಿದ್ಯಾರ್ಹತೆ ಹಾಗೂ ಇತರೆ ಪ್ರಮಾಣ ಪತ್ರಗಳ ಪ್ರಮಾಣಿತ ಪ್ರತಿಗಳೊಂದಿಗೆ 'ಆಡಳಿತಾಧಿಕಾರಿಗಳು', ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯ ಕೋಶ), ನಂ.8, 4ನೇ ಮಹಡಿ, ಎಂ.ಎಫ್. ಬಿಲ್ಡಿಂಗ್ಸ್–II, ಕನ್ನಿಂಗ್ ಹ್ಯಾಂ ರಸ್ತೆ, ಬೆಂಗಳೂರು–560052 ಇವರಿಗೆ ದಿನಾಂಕ: 21.08.2009

ರೊಳಗಾಗಿ ತಲುಪುವಂತೆ ಸಲ್ಲಿಸತಕ್ಕದ್ದು. ಅರ್ಜಿಯನ್ನೊಳಗೊಂಡ ಲಕೋಟೆಯ ಮೇಲೆ "ಚಾಲಕರ ಹುದ್ದೆಗಾಗಿ ಅರ್ಜಿ" ಎಂದು ಸ್ಪಷ್ಟವಾಗಿ ನಮೂದಿಸತಕ್ಕದ್ದು. ಕೊನೆಯ ದಿನಾಂಕದ ನಂತರ ಸ್ವೀಕೃತವಾದ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಹಾಗೂ ಈ ಕುರಿತು ಯಾವುದೇ ಪತ್ರ ವ್ಯವಹಾರ ನಡೆಸುವುದಿಲ್ಲ.

11. ನಿಗದಿತ ನಮೂನೆಯ ಅರ್ಜಿಯನ್ನು ಅಭ್ಯರ್ಥಿಗಳು ತಮ್ಮ ಸ್ವಹಸ್ತಾಕ್ಷರಗಳಿಂದ ಭರ್ತಿ ಮಾಡಿ ಈ ಕೆಳಗಿನ ದಸ್ತಾವೇಜುಗಳೊಂದಿಗೆ ಸಲ್ಲಿಸತಕ್ಕದ್ದು.
   (1) 8ನೇ ತರಗತಿಯಲ್ಲಿ ಉತ್ತೀರ್ಣರಾಗಿರುವ ಅಂಕಪಟ್ಟಿಯ ನಕಲು.
   (2) ಮೋಟಾರು ವಾಹನ ಚಾಲನಾ ಪರವಾನಗಿ (Motor Vehicle Driving Licence) ಹೊಂದಿರುವ ಹಾಗೂ ವಿದ್ಯಾರ್ಹತೆ ಪ್ರಮಾಣ ಪತ್ರಗಳ ನಕಲು.
   (3) ಅಭ್ಯರ್ಥಿಗಳು ಸರ್ಕಾರಿ ಸೇವೆಯಲ್ಲಿದ್ದರೆ ತಮ್ಮ ಮೇಲಾಧಿಕಾರಿಗಳಿಂದ ಪ್ರಪತ್ರ–1 ರಲ್ಲಿ ಪ್ರಮಾಣಪತ್ರ ಸಲ್ಲಿಸುವುದು.
   (4) ಅಭ್ಯರ್ಥಿಗಳು ತಾವು ಓದಿದ ಕೊನೆಯ ಶಾಲೆಯಿಂದ ಹಾಗೂ ಸಮಾಜದ 02 ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ಪಡೆದ ನಡತೆ ಪ್ರಮಾಣ ಪತ್ರಗಳನ್ನು ಕ್ರಮವಾಗಿ ಪ್ರಪತ್ರ–2 ಮತ್ತು ಪ್ರಪತ್ರ–3 ರಲ್ಲಿ ಸಲ್ಲಿಸುವುದು.
   (5) ರೂ.5/–ಗಳ ಕ್ರಾಸ್ ಮಾಡಿದ 'Indian Postal Order'
   (6) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಹಾಗೂ ಮತ್ತಿತರ ಹಿಂದುಳಿದ ವರ್ಗಗಳ ಮೀಸಲಾತಿ ಬಯಸುವ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಸಕ್ಷಮ ಪ್ರಾಧಿಕಾರ ನೀಡಿದ ದಾಖಲೆಯೊಂದಿಗೆ ಅರ್ಜಿ ಸಲ್ಲಿಸುವುದು.
   (7) ಜನ್ಮ ದಿನಾಂಕ ತೋರಿಸುವ ಪ್ರಮಾಣ ಪತ್ರ

12. ಮೆರಿಟ್ ಮೇರೆಗೆ ಆಯ್ಕೆಯಾದ ಅಭ್ಯರ್ಥಿಗಳನ್ನು ಪೊಲೀಸ್ ಡ್ರೈವಿಂಗ್ ಮತ್ತು ನಿರ್ವಹಣಾ ಶಾಲೆ, ಯಲಹಂಕ, ಬೆಂಗಳೂರು ಇವರು ನಡೆಸಲಾಗುವ ಡ್ರೈವಿಂಗ್ ಪರೀಕ್ಷೆಗೆ ಒಳಪಡಿಸಿ ಅವರು ನೀಡಲಾಗುವ ಪ್ರಮಾಣ ಪತ್ರ / ಅರ್ಹತಾ ಪತ್ರವನ್ನು ಆಧರಿಸಿ ನೇಮಕಾತಿ ಮಾಡಲಾಗುವುದು.

ಡ್ರೈವಿಂಗ್ ಪರೀಕ್ಷೆಗೆ – ಆಯ್ಕೆಯಾದ ಅಭ್ಯರ್ಥಿಗಳಿಗೆ ಮಾಹಿತಿಯನ್ನು ನೀಡಲಾಗುವುದು.

ಈ ಕುರಿತು ಡ್ರೈವಿಂಗ್ ಪರೀಕ್ಷೆಗೆ ನಿಗದಿಪಡಿಸಿದ ಪ್ರಾಧಿಕಾರದಿಂದ / ಸಂಸ್ಥೆಯಿಂದ ಪ್ರಮಾಣ ಪತ್ರ ಬಾರದೇ ಇದ್ದಲ್ಲಿ ಸದರಿ ಅಭ್ಯರ್ಥಿಗಳ ಅಭ್ಯರ್ಥಿತನವನ್ನು ರದ್ದುಗೊಳಿಸಲಾಗುವುದು.

ಆಡಳಿತಾಧಿಕಾರಿಗಳು
ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯಕೋಶ)

## ಅರ್ಜಿ ನಮೂನೆ

**ಕರ್ನಾಟಕ ಸರ್ಕಾರ ಎನ್.ಸಿ.ಸಿ. ನಿರ್ದೇಶನಾಲಯ, ಗ್ರೂಪ್ 'ಸಿ' ಚಾಲಕರ ಹುದ್ದೆಗಳ ನೇಮಕಾತಿಗೆ ಅರ್ಜಿ ನಮೂನೆ**

ಅಭ್ಯರ್ಥಿಯ ಪರಿಚಯ

1. ಅಭ್ಯರ್ಥಿಯ ಪೂರ್ಣ ಹೆಸರು :
2. ತಂದೆ / ಗಂಡನ ಹೆಸರು :
3. ಜನ್ಮ ದಿನಾಂಕ :
   (ಪ್ರಮಾಣ ಪತ್ರ ಲಗತ್ತಿಸಿ)
4. ಅಂಚೆ ವಿಳಾಸ :
5. ಲಿಂಗ :
   (ಗಂಡು / ಹೆಣ್ಣು)
6. ಮೀಸಲಾತಿ ಪ್ರವರ್ಗ
   (ಪ್ರಮಾಣಪತ್ರ ಲಗತ್ತಿಸಿ)
   (ಸರ್ಕಾರದಿಂದ ನಿಗದಿಪಡಿಸಿದ ನಮೂನೆಯಲ್ಲಿಯೇ ಸಲ್ಲಿಸತಕ್ಕದ್ದು)
7. ವಿದ್ಯಾರ್ಹತೆ :
   (8ನೇ ತರಗತಿ ಪಾಸು ಮಾಡಿರುವ ಅಂಕಪಟ್ಟಿಯಿರುವ ಪ್ರಮಾಣಪತ್ರವನ್ನು ಲಗತ್ತಿಸಿ)
   (ವಾಹನಗಳ ಚಾಲನಾ ಅನುಮತಿಯ ಪ್ರಮಾಣಪತ್ರವನ್ನು ಲಗತ್ತಿಸಿ)
8. ಅಭ್ಯರ್ಥಿಯು ಈ ಕೆಳಕಂಡ ಯಾವುದಾದರೂ ಅಂಶಗಳನ್ನು ಪೂರೈಸಿರುವ ಪ್ರಮಾಣಪತ್ರಗಳನ್ನು ಲಗತ್ತಿಸಿ.

1) ಮಹಿಳಾ ಅಭ್ಯರ್ಥಿಯೆ?
2) ಮಾಜಿ ಸೈನಿಕರೇ?
3) ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಯೇ?

4) ಗ್ರಾಮೀಣ ಅಭ್ಯರ್ಥಿಯೇ?

5) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಯೇ?

ಅರ್ಜಿ ಶುಲ್ಕ ರೂ.5/– ಇಂಡಿಯನ್ ಪೋಸ್ಟಲ್ ಆರ್ಡರ್ purchased not earlier than 15 days prior to the date of application, payable to the Apppointing Authority (ಎಸ್.ಸಿ., ಎಸ್.ಟಿ. ಹಾಗೂ ಪ್ರವರ್ಗ–1 ರ ಅಭ್ಯರ್ಥಿಗಳಿಗೆ ಅರ್ಜಿ ಶುಲ್ಕ ಇಲ್ಲ).

ಇಂಡಿಯನ್ ಪೋಸ್ಟಲ್ ಆರ್ಡರ್‌ನ್ನು ಆಡಳಿತಾಧಿಕಾರಿಯವರು, ಎನ್.ಸಿ.ಸಿ. ನಿರ್ದೇಶನಾಲಯ (ರಾಜ್ಯಕೋಶ) ಇವರ ಹೆಸರಿನಲ್ಲಿ ಪಡೆದು ಸಲ್ಲಿಸತಕ್ಕದ್ದು.

ಹೆಚ್ಚಿನ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

**ದಯಾನಂದ ಶೆಟ್ಟಿ**
ಆಡಳಿತಾಧಿಕಾರಿ
ಎನ್‌ಸಿಸಿ ನಿರ್ದೇಶನಾಲಯ (ರಾಜ್ಯಕೋಶ), ಬೆಂಗಳೂರು

**ಪ್ರಪತ್ರ–1**

**(ಸರ್ಕಾರಿ ಸೇವೆಯಲ್ಲಿರುವ ನೌಕರರ ಉಪಯೋಗಕ್ಕಾಗಿ ಮಾತ್ರ)**

**ಮೇಲಾಧಿಕಾರಿಯ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ———————————————————— ಇವರು ರಾಜ್ಯ ಸರ್ಕಾರದ—————— ಇಲಾಖೆಯಲ್ಲಿ———————————ಹುದ್ದೆಯಲ್ಲಿ ದಿನಾಂಕ—————————ರಿಂದ ————————————ರವರೆಗೆ ನೇಮಕಾತಿ ನಿಯಮಗಳ ಮೇರೆಗೆ ಕ್ರಮಬದ್ಧವಾಗಿ / ಸ್ಥಳೀಯ ಅಭ್ಯರ್ಥಿಯಾಗಿ ನೇಮಕಗೊಂಡಿದ್ದರು ಎಂದು ಪ್ರಮಾಣೀಕರಿಸುತ್ತೇವೆ. ನನಗೆ ತಿಳಿದ ಮಟ್ಟಿಗೆ ಅವರು ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸುತ್ತಿದ್ದಾರೆ, ನಿರ್ವಹಿಸುತ್ತಿದ್ದರು. ಅವರ ನಡತೆ ಚೆನ್ನಾಗಿದೆ, ಅವರು ಅಪೇಕ್ಷಿಸಿದ ಹುದ್ದೆಗೆ ಅರ್ಜಿಯನ್ನು ಸಲ್ಲಿಸಲು ಅನುಮತಿ ನೀಡಲಾಗಿದೆ.

ಸ್ಥಳ:

ದಿನಾಂಕ: ಸಹಿ/

**ಪ್ರಪತ್ರ–2**

**(ಶಾಲಾ ನಡತೆಯ ಪ್ರಮಾಣಪತ್ರ)**

ಶ್ರೀ / ಶ್ರೀಮತಿ ———————————————————— ರವರ ಮಗ / ಮಗಳು ಆದ ಶ್ರೀ / ಶ್ರೀಮತಿ——————————————— ಇವರು ನಮ್ಮ ಶಾಲೆಯಲ್ಲಿ——————————— ವರ್ಷದಿಂದ ವರ್ಷದವರೆಗೆ———————————ತರಗತಿಯಲ್ಲಿ ಅಭ್ಯಾಸ ಮಾಡಿರುತ್ತಾರೆ. ಈ ಅಭ್ಯಾಸದ ಅವಧಿಯಲ್ಲಿ ಇವರು ಒಳ್ಳೆಯ ನಡತೆಯುಳ್ಳವರಾಗಿದ್ದರು.

ಸ್ಥಳ: ಮುಖ್ಯೋಪಾಧ್ಯಾಯರ ಸಹಿ/ಪ್ರಾಂಶುಪಾಲರ ಸಹಿ

ದಿನಾಂಕ: (ಮೊಹರು) (ಮೊಹರು)

**ಪ್ರಪತ್ರ–3**

**ಸ್ಥಳೀಯ ಗಣ್ಯವ್ಯಕ್ತಿಗಳ ಪ್ರಮಾಣಪತ್ರ**

**ನಡತೆ ಪ್ರಮಾಣ ಪತ್ರ**

ಶ್ರೀ / ಶ್ರೀಮತಿ ———————————————————————— ರವರ ಮಗ / ಮಗಳು ಆದ ಶ್ರೀ / ಶ್ರೀಮತಿ ———————————————————— ಇವರು ನನಗೆ——————————— ವರ್ಷ————————————————— ತಿಂಗಳುಗಳಿಂದ ಪರಿಚಯವಿದೆ ಎಂದು ಪ್ರಮಾಣೀಕರಿಸುತ್ತೇನೆ ಮತ್ತು ನನಗೆ ತಿಳಿದಿರುವಂತೆ ಇವರು ಒಳ್ಳೆಯ ನಡತೆಯುಳ್ಳವರಾಗಿದ್ದಾರೆ ಮತ್ತು ಸರ್ಕಾರಿ ಉದ್ಯೋಗಕ್ಕೆ ಅನರ್ಹರಾಗುವಂತಹ ಯಾವ ಪೂರ್ವೋತ್ತರಗಳೂ ಇರುವುದಿಲ್ಲ.

ಶ್ರೀ / ಶ್ರೀಮತಿ——————————————————————— ಇವರು ನನಗೆ ಸಂಬಂಧಿಕರಲ್ಲ.

ಸ್ಥಳ: ಸಹಿ/–

ದಿನಾಂಕ: ಪೂರ್ಣ ವಿಳಾಸ

ಪಿ.ಆರ್. 604

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ

### ನೇಮಕಾತಿ ಪ್ರಕಟಣೆ

**ಅಧಿಸೂಚನೆ ಸಂಖ್ಯೆ: ಎಡಿಎಂ.21/2009, ದಿನಾಂಕ: 23ನೇ ಜುಲೈ 2009**

**ವಿಷಯ:** ಶೀಘ್ರಲಿಪಿಗಾರರು, ಪ್ರೋಸಸ್ ಸರ್ವರ್ ಮತ್ತು ಜವಾನರ ಹುದ್ದೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಬಗ್ಗೆ.

**ಉಲ್ಲೇಖ:** 1. ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದ ಪತ್ರದ ಸಂಖ್ಯೆ:ಎಲ್‌ಸಿಎ–II 205/2004. ದಿನಾಂಕ:02.05.2008ರ ಅನ್ವಯ ಉಳಿದಿರುವ ಒಂದು ಶೀಘ್ರಲಿಪಿಗಾರರ (ಬ್ಯಾಕ್‌ಲಾಗ್) ಹುದ್ದೆಯನ್ನು ಭರ್ತಿ ಮಾಡಿಕೊಳ್ಳಲು.

2. ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯದ ಪತ್ರದ ಸಂಖ್ಯೆ:ಎಲ್‌ಸಿಎ–II 205/2004. ದಿನಾಂಕ:17.06.2009ರ ಅನ್ವಯ 2 ಪ್ರೋಸಸ್ ಸರ್ವರ್ ಮತ್ತು 1 ಜವಾನರ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಿರುತ್ತಾರೆ.

ಮೇಲ್ಕಂಡ ಅಧಿಸೂಚನೆಯನ್ವಯ ರಾಮನಗರ ಜಿಲ್ಲಾ ನ್ಯಾಯಾಲಯ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರು, ಪ್ರೋಸಸ್ ಸರ್ವರ್ ಮತ್ತು ಜವಾನರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿ ಪಡಿಸಿದ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ ದಿನಾಂಕ: 31.08.2009 ರಂದು ಸಂಜೆ 4.00 ಗಂಟೆಯ ಒಳಗೆ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸಲ್ಲಿಸಲು ನಿಗದಿ ಮಾಡಿದ ಕೊನೆಯ ದಿನಾಂಕ: 31.8.2009 ರ ಸೋಮವಾರ ಸಂಜೆ 4.00 ಗಂಟೆಯವರೆಗೆ**

**ಖಾಲಿ ಇರುವ ಹುದ್ದೆಗಳ ವರ್ಗೀಕರಣ:**

**I. ಶೀಘ್ರಲಿಪಿಗಾರರ ಹುದ್ದೆ**

1. ಹುದ್ದೆಗಳ ಸಂಖ್ಯೆ : 1
2. ವೇತನ ಶ್ರೇಣಿ – 7250–175–7800–200–8600–225–9500–250–10500–300–12300–350–13350 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. **ಹುದ್ದೆಗಳ ವರ್ಗೀಕರಣ :**

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಒಟ್ಟು |
|---|---|---|---|---|
| ಪರಿಶಿಷ್ಟ ಪಂಗಡ (ಬ್ಯಾಕ್‌ಲಾಗ್) | 1 | – | – | 1 |
| **ಒಟ್ಟು** | **1** | **–** | **–** | **1** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ ದರ್ಜೆಯ (Senior Grade) ಕನ್ನಡ ಮತ್ತು ಆಂಗ್ಲ ಬಾಷೆಗಳ ಬೆರಳಚ್ಚು ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

ಸಿ) ಕರ್ನಾಟಕ ಪ್ರೌಢ ಶಿಕ್ಷಣ ಮಂಡಳಿಯು ನಡೆಸುವ ಹಿರಿಯ (Senior Grade) ದರ್ಜೆಯ ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**II. ಪ್ರೊಸಸ್ ಸರ್ವರ್ ಹುದ್ದೆ**

1. **ಹುದ್ದೆಗಳ ಸಂಖ್ಯೆ : 2**
2. ವೇತನ ಶ್ರೇಣಿ – 5200–100–6000–125–6500–150–7100–175–7800–200–8200 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. **ಹುದ್ದೆಗಳ ವರ್ಗೀಕರಣ:**

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ | 1 | – | – | 1 |
| ಪರಿಶಿಷ್ಟ ಜಾತಿ | – | 1 | – | 1 |
| **ಒಟ್ಟು** | **1** | **1** | **–** | **2** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.

ಬಿ) ಡ್ರೈವಿಂಗ್ ಲೈಸೆನ್ಸ್ ಹೊಂದಿರುವವರಿಗೆ ಆದ್ಯತೆ ನೀಡಲಾಗುವುದು.

**III. ಜವಾನರು:**

1. ಹುದ್ದೆಗಳ ಸಂಖ್ಯೆ : 1
2. ವೇತನ ಶ್ರೇಣಿ – 4800–100–6000–125–6500–150–7100–175–7275 ಹಾಗೂ ಲಭ್ಯವಿರುವ ಇತರೆ ಭತ್ಯೆಗಳು
3. **ಹುದ್ದೆಗಳ ವರ್ಗೀಕರಣ :**

| ವರ್ಗೀಕರಣ | ಇತರೆ | ಗ್ರಾಮೀಣ | ಮಹಿಳಾ | ಒಟ್ಟು |
|---|---|---|---|---|
| ಸಾಮಾನ್ಯ ಅಭ್ಯರ್ಥಿ | – | – | 1 | 1 |
| **ಒಟ್ಟು** | – | – | **1** | **1** |

**4. ಶೈಕ್ಷಣಿಕ ವಿದ್ಯಾರ್ಹತೆ:**

ಎ) 7ನೇ ತರಗತಿಯಲ್ಲಿ ತೇರ್ಗಡೆ ಹೊಂದಿರಬೇಕು.

ಬಿ) ಅಭ್ಯರ್ಥಿಗೆ ಕನ್ನಡದಲ್ಲಿ ಓದಲು ಹಾಗೂ ಬರೆಯಲು ತಿಳಿದಿರಬೇಕು.

**ವಯೋಮಿತಿ:**

| | | | | |
|---|---|---|---|---|
| ಕನಿಷ್ಠ ವಯೋಮಿತಿ | : | 18 ವರ್ಷ | | |
| ಗರಿಷ್ಠ ವೆಯೋಮಿತಿ | : | ಸಾಮಾನ್ಯ ವರ್ಗ | – | 35 ವರ್ಷ |
| | | 2ಎ, 2ಬಿ, 3ಎ, 3ಬಿ | – | 38 ವರ್ಷ |
| | | ಪ.ಜಾ, ಪ.ಪಂ, ಪ್ರವರ್ಗ 1 | – | 40 ವರ್ಷ |

ವಿಧವೆಯರಿಗೆ, ಮಾಜಿ ಸೈನಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು.

**ಆಯ್ಕೆ ವಿಧಾನ :**

ಕರ್ನಾಟಕ ಅಧೀನ ನ್ಯಾಯಾಲಯಗಳು (ಮಿನಿಸ್ಟೀರಿಯಲ್ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರ ನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

I. ಶೀಘ್ರಲಿಪಿಗಾರರ ಹುದ್ದೆಗೆ ಈ ಕೆಳಕಂಡ ಅರ್ಹತಾ ಪರೀಕ್ಷೆಯನ್ನು ನಡೆಸಲಾಗುವುದು.

ಅ) ಒಂದು ನಿಮಿಷಕ್ಕೆ 120 ಶಬ್ಧಗಳಂತೆ 5 ನಿಮಿಷಗಳ ಅವಧಿಯ ಉಕ್ತಲೇಖನ ಮತ್ತು ಅದನ್ನು ಲಿಪ್ಯಂತರ ಮಾಡಲು 45 ನಿಮಿಷಗಳ ಅವಧಿ. (ಗರಿಷ್ಠ 100 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗಿರುತ್ತದೆ)

ಆ) ಶೀಘ್ರಲಿಪಿಗಾರರ ಹುದ್ದೆಗೆ ಅವರು ಪಡೆದಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಗಳು ಮತ್ತು ಅರ್ಹತಾ ಪರೀಕ್ಷೆಯ ಗರಿಷ್ಠ ಅಂಕಗಳ ಆಧಾರದ ಮೇಲೆ ಒಂದು ಹುದ್ದೆಗೆ ಐದು ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವುದು.

**II. ಪ್ರೋಸಸ್ ಸರ್ವರ್ ಹುದ್ದೆಗೆ :**

ಅ) ಪ್ರೋಸಸ್ ಸರ್ವರ್ ಹುದ್ದೆಗೆ ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಪಡೆದ ಗರಿಷ್ಠ ಅಂಕಗಳ ಅರ್ಹತೆಯ ಆಧಾರದ ಮೇಲೆ ಒಂದು ಹುದ್ದೆಗೆ 25 ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಕರೆಯಲಾಗುವುದು.

ಆ) ಸಂದರ್ಶನಕ್ಕೆ ಕರೆಯಲಾಗುವ ಅಭ್ಯರ್ಥಿಗೆ ಕನ್ನಡದಲ್ಲಿ ಓದುವ ಹಾಗೂ ಬರೆಯುವ ಬಗ್ಗೆ ಪ್ರವೀಣತೆ ಮತ್ತು ಸಾಮಾನ್ಯಜ್ಞಾನದ ತಿಳುವಳಿಕೆಯ ಬಗ್ಗೆ ಪರೀಕ್ಷಿಸಲಾಗುವುದು.

**III. ಜವಾನರ ಹುದ್ದೆಗೆ :**

ಅ) ಜವಾನರ ಹುದ್ದೆಗೆ 7ನೇ ತರಗತಿಯಲ್ಲಿ ಪಡೆದ ಗರಿಷ್ಠ ಅಂಕಗಳ ಅರ್ಹತೆಯ ಆಧಾರದ ಮೇಲೆ ಒಂದು ಹುದ್ದೆಗೆ 10 ಅಭ್ಯರ್ಥಿಗಳನ್ನು ಮಾತ್ರ ಸಂದರ್ಶನಕ್ಕೆ ಕರೆಯಲಾಗುವುದು.

**ಪ್ರಮುಖವಾದ ಸೂಚನೆಗಳು:**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳ ಒಂದೊಂದು ಛಾಯಾ ಪ್ರತಿ (ಫೋಟೋ ಕಾಪಿ/ಜೆರಾಕ್ಸ್) ಗಳನ್ನು ಸ್ವಯಂ–ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಬೇಕು. ಅರ್ಜಿಯೊಂದಿಗೆ ಮೂಲ ಪ್ರತಿ (ಒರಿಜಿನಲ್) ಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ.

1. ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ ಅಂಕಪಟ್ಟಿಗಳು ಹಾಗೂ ಪ್ರಮಾಣ ಪತ್ರಗಳು.
2. ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ, ವರ್ಗಾವಣೆ ಪ್ರಮಾಣ ಪತ್ರ, ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.
3. ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ – 1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
4. ಅಭ್ಯರ್ಥಿಯು ಕೊನೆಯಲ್ಲಿ ವಿದ್ಯಾಭ್ಯಾಸ ಮಾಡಿದ ಶಾಲಾ, ಕಾಲೇಜಿನ ಮುಖೋಪಾಧ್ಯಾಯರು, ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ.
5. ಅಭ್ಯರ್ಥಿಯ ನಡತೆಯನ್ನು ದೃಢೀಕರಿಸುವ ಬಗ್ಗೆ ಅವನು ಓದಿರುವ ವಿದ್ಯಾಸಂಸ್ಥೆಗಳಿಗೆ ಸಂಬಂಧಪಡದ ಹಾಗೂ ಅಭ್ಯರ್ಥಿಯ ಸಂಬಂಧಿಗಳಲ್ಲದ ಇಬ್ಬರು ಸ್ಥಳೀಯ ಗಣ್ಯವ್ಯಕ್ತಿಗಳಿಂದ ಪಡೆದ 6 ತಿಂಗಳ ಈಚೆಗಿನ ಎರಡು ನಡತೆ ಪ್ರಮಾಣ ಪತ್ರಗಳು.

**ಇತರೆ ಸೂಚನೆಗಳು:**

1. ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ತಮ್ಮ ಮೇಲಾಧಿಕಾರಿಗಳಿಂದ ಪಡೆದ ದೃಢೀಕರಣ ಹಾಗೂ ಅನುಮತಿ ಪ್ರಮಾಣ ಪತ್ರವನ್ನು ನೀಡತಕ್ಕದ್ದು.

2. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.
3. ಅರ್ಜಿಯೊಂದಿಗೆ 6 ರೂಪಾಯಿಯ ಅಂಚೆ ಮುದ್ರಾಂಕ (Postal Stamp) ವನ್ನು ಹೊಂದಿರುವ ಸ್ವ–ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
4. ಅರ್ಜಿಯೊಂದಿಗೆ ಅಭ್ಯರ್ಥಿಗಳು ತಮ್ಮ ಇತ್ತೀಚಿನ ಒಂದು ಭಾವಚಿತ್ರವನ್ನು ಸ್ವ–ದೃಢೀಕರಿಸಿ ಲಗತ್ತಿಸಬೇಕು.
5. ಸಂದರ್ಶನಕ್ಕೆ ಆಯ್ಕೆಯಾದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಂದರ್ಶನಕ್ಕೆ ಹಾಜರಾಗಬೇಕು ಹಾಗೂ ಸಂದರ್ಶನ ಪತ್ರ ಬಾರದಿರುವ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಲ್ಲವೆಂದು ಭಾವಿಸಿಕೊಳ್ಳತಕ್ಕದ್ದು.
6. ಆಯ್ಕೆಯ ಸಂಬಂಧವಾಗಿ ಸಂದರ್ಶನಕ್ಕೆ ಅನರ್ಹರಾದ ಅಭ್ಯರ್ಥಿಗಳು ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ

**ವಿಶೇಷ ಸೂಚನೆ:**

1. ಮೇಲ್ಕಂಡ ಹುದ್ದೆಗಳಿಗೆ ಅರ್ಜಿಗಳನ್ನು ರಾಮನಗರ ಜಿಲ್ಲಾ ನ್ಯಾಯಾಲಯದ ಕಛೇರಿಯಲ್ಲಿ ವಿತರಿಸಲಾಗುತ್ತದೆ.
2. ಅರ್ಜಿಗಳನ್ನು ಪಡೆಯ ಬಯಸುವ ಅಭ್ಯರ್ಥಿಯು ಕ್ರಾಸ್ ಮಾಡಿದ 10 ರೂ.ಗಳ ಭಾರತೀಯ ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **"ಜಿಲ್ಲಾ ನ್ಯಾಯಾಧೀಶರು, ರಾಮನಗರ"** ರವರ ಹೆಸರಿಗೆ ಪಡೆದು ರಾಮನಗರ ಜಿಲ್ಲಾ ನ್ಯಾಯಾಲಯದ ಕಛೇರಿಗೆ ಸಲ್ಲಿಸಿ ಪಡೆಯಬಹುದು. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು ಈ ನೇಮಕಾತಿ ಪ್ರಕಟಣಾ ದಿನದಿಂದ 15 ದಿವಸಗಳಿಗಿಂತ ಮುಂಚಿತವಾಗಿ ಪಡೆದಿರಬಾರದು. ಅಂಚೆ ಮೂಲಕ ಅರ್ಜಿ ಪಡೆಯಬಯಸುವ ಅಭ್ಯರ್ಥಿಗಳು 30 ರೂ. ಅಂಚೆ ಚೀಟಿ ಅಂಟಿಸಿದ ಸ್ವ–ವಿಳಾಸ ಬರೆದ ಲಕೋಟೆಯನ್ನು ಮತ್ತು 10 ರೂ. ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯ ಸಮೇತ ಕಳುಹಿಸಿದ್ದಲ್ಲಿ ಅರ್ಜಿಯನ್ನು ಕಳುಹಿಸಲಾಗುವುದು.
3. ಭರ್ತಿ ಮಾಡಿದ ಅರ್ಜಿಯ ಜೊತೆಗೆ ರೂ.50 (ಎಸ್.ಸಿ/ಎಸ್.ಟಿ ಮತ್ತು ಪ್ರವರ್ಗ–1ಕ್ಕೆ ರೂ.30) ಪೋಸ್ಟಲ್ ಆರ್ಡರ್ ಅಥವಾ ಬ್ಯಾಂಕ್ ಡಿ.ಡಿ.ಯನ್ನು **"ಜಿಲ್ಲಾ ನ್ಯಾಯಾಧೀಶರು, ರಾಮನಗರ"** ರವರ ಹೆಸರಿನಲ್ಲಿ ಪಡೆದು ಪ್ರೊಸೆಸಿಂಗ್ ಶುಲ್ಕವಾಗಿ ಲಗತ್ತಿಸಿ ದಿನಾಂಕಃ 31.08.2009 ರ ಸಂಜೆ 4.00 ಗಂಟೆಯೊಳಗೆ ಜಿಲ್ಲಾ ನ್ಯಾಯಾಧೀಶರು, ಜಿಲ್ಲಾ ನ್ಯಾಯಾಲಯ, ರಾಮನಗರ ರವರಿಗೆ ಸಲ್ಲಿಸತಕ್ಕದ್ದು.
4. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ನಿಗದಿತ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ/ಗಣಕೀಕೃತ ಪ್ರತಿಯಲ್ಲಿ ಎಲ್ಲಾ ಅಂಕಣಗಳನ್ನು ನಿಗದಿತ ಉತ್ತರಗಳಿಂದ ಭರ್ತಿ ಮಾಡಿರತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿ ಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಸಿ.ಜಿ. ಹುನಗುಂದ**

ಪಿ.ಆರ್. 621 ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ರಾಮನಗರ.

**[ನಮೂನೆ–1]**

**[9ನೇ ನಿಯಮ ನೋಡಿ]**

**ಪೌರಾಡಳಿತ ನಿರ್ದೇಶನಾಲಯ**

**ಅಧಿಸೂಚನೆ**

**ಸಂಖ್ಯೆ:ಪೌನಿ/ಸಿಬ್ಬಂದಿ/ಬಾಜಿ/23/2004–05/1625, ಬೆಂಗಳೂರು, ದಿನಾಂಕ: 21ನೇ ಜುಲೈ 2009**

ಶ್ರೀ **ಬಾಬುರಾವ್ ರಾಮಪ್ಪ ಬಂಡಿವಡ್ಡರ,** ಪ್ರಥಮ ದರ್ಜೆ ಸಹಾಯಕರು, ಸ್ವಂತ ವೇತನ ಶ್ರೇಣಿ ಮುಖ್ಯಾಧಿಕಾರಿಯಾಗಿ ಪೌರಾಡಳಿತ ಇಲಾಖೆಯ ಮಹಾಲಿಂಗಪುರ ಪುರಸಭೆಯಲ್ಲಿ ಕೆಲಸ ಮಾಡುತ್ತಿರುವ ಇವರ ಹೆಸರನ್ನು ಶ್ರೀ **'ಬಾಬುರಾವ್ ರಾಮಪ್ಪ ಕಮತಗಿ'** ಎಂದು ಈ ಹೆಸರಿಗೆ ಬದಲಾವಣೆ ಮಾಡಲು ಅನುಮತಿ ನೀಡಿದೆ.

ನಿರ್ದೇಶಕರು

ಪಿ.ಡಿ. 117 ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು

(ನೇಮಕಾಧಿಕಾರಿಯವರ ಸಹಿ ಮತ್ತು ಪದನಾಮ)

**[FORM – I]**

**(See Rule 9)**

**EDUCATION DEPARTMENT**

**Office of the Deputy Director, Public Education Department, Bijapur**

**NOTIFICATION**

Shri **VASUDEV MANOHAR LAMANI** Working as Assistant Master in the Education Department of Office of Government P.U.College Jigajevani (High School Section) Tq: Indi Dist: Bijapur is permitted to change his Surname to **VASUDEV MANOHAR CHAVAN**

Deputy Director,

P.D. 118 Public Education Department, Bijapur.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,**
**ಮಂಗಳೂರು ವಿಭಾಗ, ಮಂಗಳೂರು**

**ತಿದ್ದುಪಡಿ**

**ಸಂಖ್ಯೆ:ಲೋ.ಇ:ಮಂವಿ:ಟಿ.ಎನ್.ಡಿ(21ಇ):2009–10:ಎಇ–1, ದಿನಾಂಕ: 25ನೇ ಜುಲೈ 2009**

ದಿನಾಂಕ: 25.7.2009ರ 'ಜಯ ಕಿರಣ' ಮತ್ತು 'ದಿ ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಟೆಂಡರ್ ನೋಟಿಫಿಕೇಶನ್ ನಂ:ಲೋ.ಇ:ಮಂ.ವಿ:ಟಿ.ಎನ್.ಡಿ:(21ಇ):2009–10:ಎಇ–1:ದಿನಾಂಕ: 23.7.2009ರ ಪ್ರಕಟಣೆಯಲ್ಲಿ ಸೂಚಿಸಿದ ಈ ಕೆಳಗಿನ ಕಾಮಗಾರಿಗಳಿಗೆ ಆಹ್ವಾನಿಸಲಾಗಿರುವ ಟೆಂಡರ್ ಪ್ರಕಟಣೆಗೆ ಈ ಕೆಳಕಂಡಂತೆ ತಿದ್ದುಪಡಿ ಮಾಡಲಾಗಿದೆ.

ಕ್ರಮ ಸಂಖ್ಯೆ 2 ಮತ್ತು 3 ರಲ್ಲಿ ಸೂಚಿಸಿರುವ ಕಾಮಗಾರಿಗಳು ಈ ಕೆಳಕಂಡಂತಿರುತ್ತದೆ.

ಕ್ರಮ ಸಂಖ್ಯೆ 2: ಬಂಟ್ವಾಳ ತಾಲ್ಲೂಕಿನ ಕುಡ್ದುಪದವು–ಅಮ್ಮೈ ರಸ್ತೆ ಅಭಿವೃದ್ಧಿ. (ಅಂ. ಮೊತ್ತ 100.00 ಲಕ್ಷ)

ಕ್ರಮ ಸಂಖ್ಯೆ 3: ಪುತ್ತೂರು ತಾಲ್ಲೂಕಿನ ಐವರನಾಡು–ಪಾಲೆಪ್ಪಾಡಿ ಅಮಲ ರಸ್ತೆ ಅಭಿವೃದ್ಧಿ. (ಅಂ. ಮೊತ್ತ 69.00 ಲಕ್ಷ)

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿರುವ ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿದೆ. ಹಾಗೂ ನೋಟಿಫಿಕೇಶನ್‌ನ್ನು http//www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್,
ಪಿ.ಆರ್. 618 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಮಂಗಳೂರು ವಿಭಾಗ, ಮಂಗಳೂರು**

**ಸಮಯಾವಧಿ ವಿಸ್ತರಣೆ**

**ಲೋ.ಇ:ಮಂ.ವಿ:ಟಿ.ಎನ್.ಡಿ(14ಇ):2009–10:ಎಇ1, ದಿನಾಂಕ: 25ನೇ ಜುಲೈ 2009**

ದಿನಾಂಕ:28.6.2009ರ 'ಡೆಕ್ಕನ್ ಹೆರಾಲ್ಡ್' ಮತ್ತು 29.6.2009 'ಕರಾವಳಿ ಅಲೆ' ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಟೆಂಡರ್ ನೋಟಿಫಿಕೇಶನ್ ನಂ:ಲೋ.ಇ:ಮಂ.ವಿ:ಟಿ.ಎನ್.ಡಿ(14ಇ):2009–10:ಎಇ1:ದಿನಾಂಕ:27.06.2009ರ ಪ್ರಕಟಣೆಗಳಲ್ಲಿ ಸೂಚಿಸಿದ ಈ ಕೆಳಗಿನ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಆಹ್ವಾನಿಸಲಾದ ಟೆಂಡರ್ ಪ್ರಕಟಣೆಗೆ ಸಮಯಾವಧಿ ವಿಸ್ತರಣೆಯನ್ನು ಈ ಕೆಳಗಿನಂತೆ ಪರಿಷ್ಕರಿಸಲಾಗಿದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| **I** | **ಲೆಕ್ಕ ಶೀರ್ಷಿಕೆ 5054 ಒ.ಆರ್.ಎಫ್** | |
| 1. | ಬಂಟ್ವಾಳ ತಾಲ್ಲೂಕಿನ ಬಂಟ್ವಾಳ ಕ್ಷೇತ್ರದ ಬೈತುರ್ಲಿ–ನೀರುಮಾರ್ಗ ಕಲ್ಪನೆ ರಸ್ತೆಯ ಕಿ.ಮೀ. 13.00 ರಿಂದ 15.20ರ ವರೆಗೆ ರಸ್ತೆ ಅಗಲಗೊಳಿಸಿ ಡಾಂಬರೀಕರಣ ಮತ್ತು ಅಭಿವೃದ್ಧಿ. | 60.00 |

1. ದಿನಾಂಕ:1.8.2009 ರಿಂದ 12.8.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download)
2. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 12.8.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿರುವ ಟೆಂಡರು ಡಾಕ್ಯುಮೆಂಟ್ ನಲ್ಲಿ ಪಡೆಯಬಹುದಾಗಿದೆ. ಹಾಗೂ ನೋಟಿಫಿಕೇಷನ್‌ನ್ನು http//www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್
ಪಿ.ಆರ್. 619 ಲೋಕೋಪಯೋಗಿ, ಬಂದರು ಮತ್ತು ಒಳನಾಡು
ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಸಮಯಾವಧಿ ವಿಸ್ತರಣೆ/ತಿದ್ದುಪಡಿ**

**ಲೋ.ಇ:ಮಂ.ವಿ:ಟಿ.ಎನ್.ಡಿ(6ಇ):2009–10:ಎಇ1, ದಿನಾಂಕ: 27ನೇ ಜುಲೈ 2009**

ದಿನಾಂಕ:9.7.2009ರ 'ಸಂಯುಕ್ತ ಕರ್ನಾಟಕ' ಮತ್ತು ದಿನಾಂಕ:10.7.2009ರ 'ಟೈಮ್ಸ್ ಆಫ್ ಇಂಡಿಯ' ದಿನಪತ್ರಿಕೆಗಳಲ್ಲಿ ಪ್ರಕಟವಾದ ಈ ಕಛೇರಿಯ ಟೆಂಡರ್ ನೋಟಿಫಿಕೇಶನ್ ನಂ:ಲೋ.ಇ:ಮಂ.ವಿ:ಟಿ.ಎನ್.ಡಿ(6ಇ):2009–10:ಎಇ1:ದಿನಾಂಕ:7.7.2009ರ ಪ್ರಕಟಣೆಗಳಲ್ಲಿ ಸೂಚಿಸಿದ ಈ ಕೆಳಗಿನ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಆಹ್ವಾನಿಸಲಾದ ಟೆಂಡರ್ ಪ್ರಕಟಣೆಗೆ ಸಮಯಾವಧಿ ವಿಸ್ತರಣೆಯನ್ನು ಈ ಕೆಳಗಿನಂತೆ ಪರಿಷ್ಕರಿಸಲಾಗಿದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ ಠೇವಣಿ (ಲಕ್ಷಗಳಲ್ಲಿ) |
|---|---|---|---|
| **I** | **ಸುವರ್ಣ ರಸ್ತೆ ಅಭಿವೃದ್ಧಿ ಯೋಜನೆಯಡಿ** | | |
| 1 | ಮಂಗಳೂರು ತಾಲ್ಲೂಕಿನ ಬೆಳುವಾಯು – ಅಳಿಯೂರು ರಸ್ತೆ ಕಿ.ಮೀ. 0.00 ರಿಂದ 1.60ರ ವರೆಗೆ ಅಭಿವೃದ್ಧಿ | 104.16 | 2.00 |
| 2 | ಮಂಗಳೂರು ತಾಲ್ಲೂಕಿನ ನೀರು ಮಾರ್ಗ ಅಡ್ಯರು ಅರ್ಕುಳ ರಸ್ತೆ ಕಿ.ಮೀ. 0.00 ರಿಂದ 3.00ರ ವರೆಗೆ ಅಭಿವೃದ್ಧಿ | 104.16 | 2.00 |
| 3 | ಮಂಗಳೂರು ತಾಲ್ಲೂಕಿನ ಮಾಣಿ ಉಳ್ಳಾಲ ರಸ್ತೆ ಕಿ.ಮೀ. 16.40 ರಿಂದ 2.40ರ ವರೆಗೆ ಅಭಿವೃದ್ಧಿ | 104.16 | 2.00 |
| 4 | ಪುತ್ತೂರು ತಾಲ್ಲೂಕಿನ ಸುಬ್ರಹ್ಮಣ್ಯ ಮಂಜೇಶ್ವರ ರಾ.ಹೆ. 100 ರಸ್ತೆಯ ಕಿ.ಮೀ 46 ರಿಂದ 49ರ ವರೆಗೆ ಅಗಲಗೊಳಿಸಿ ಅಭಿವೃದ್ಧಿ | 104.16 | 2.00 |
| 5 | ಬೆಳ್ತಂಗಡಿ ತಾಲ್ಲೂಕಿನ ಕಡೂರು ಕಾಞಂಗಾಡ್ ರಸ್ತೆಯ ಕಿ.ಮೀ 124.07 ರಿಂದ 145.79ರ ವರೆಗೆ ಅಭಿವೃದ್ಧಿ | 104.16 | 2.00 |
| 6 | ಸುಳ್ಯ ತಾಲ್ಲೂಕಿನ ಬೆಳ್ಳಾರೆ ಬೆಂಗಮಲೆ ಪೈಚಾರ್ ರಸ್ತೆಯ ಕಿ.ಮೀ. 6.00 ರಿಂದ 9.00ರ ವರೆಗೆ ರಸ್ತೆ ಅಗಲಗೊಳಿಸಿ ಅಭಿವೃದ್ಧಿ | 104.16 | 2.00 |
| 7 | ಬಂಟ್ವಾಳ ತಾಲ್ಲೂಕು ಸುಬ್ರಹ್ಮಣ್ಯ ಮಂಜೇಶ್ವರ ರಸ್ತೆಯ ಕಿ.ಮೀ. 81.00 ರಿಂದ 84.00ರ ವರೆಗೆ ರಸ್ತೆ ಎರಡು ಬದಿಗಳಲ್ಲಿ ಜಲ್ಲಿ ಹಾಕಿ ಅಗಲಗೊಳಿಸಿ ಡಾಂಬರೀಕರಣ ಹಾಗೂ ಅಭಿವೃದ್ಧಿ | 104.16 | 2.00 |

1. ದಿನಾಂಕ:17.8.2009 ರಿಂದ 24.8.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download)
2. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ:24.8.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.

ಮೇಲಿನ ಬದಲಾವಣೆಗಳನ್ನು ಹೊರತುಪಡಿಸಿ ಇನ್ನಾವುದೇ ಬದಲಾವಣೆ ಇರುವುದಿಲ್ಲ. ಹೆಚ್ಚಿನ ವಿವರಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿರುವ ಟೆಂಡರು ಡಾಕ್ಯುಮೆಂಟ್ ನಲ್ಲಿ ಪಡೆಯಬಹುದಾಗಿದೆ. ಹಾಗೂ ನೋಟಿಫಿಕೇಷನ್‌ನ್ನು http//www.kpwd.gov.in ಇಲಾಖಾ ವೆಬ್‌ಸೈಟ್‌ನಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಇಂಜಿನಿಯರ್

ಪಿ.ಆರ್. 629

ಲೋಕೋಪಯೋಗಿ, ಬಂದರು ಮತ್ತು ಒಳನಾಡು

ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು.

## ತೋಟಗಾರಿಕೆ ಇಲಾಖೆ

## ತೋಟಗಾರಿಕೆ ಉಪನಿರ್ದೇಶಕರ ಕಛೇರಿ, ಲಾಲ್‌ಬಾಗ್ ಸಸ್ಯತೋಟ, ಬೆಂಗಳೂರು

### ಸಂಕ್ಷಿಪ್ತ ಟೆಂಡರ್ ಪ್ರಕಟಣೆ

**ಸಂಖ್ಯೆ:ತೋಉನಿ:ಲಾಸತೋ:ವಿನಿ1:20:09–10, ದಿನಾಂಕ: 25ನೇ ಜುಲೈ 2009**

ಲಾಲ್‌ಬಾಗ್ ಸಸ್ಯತೋಟದಲ್ಲಿ ಹಾಲಿ ಚಾಲ್ತಿಯಲ್ಲಿರುವ ಕೊಳವೆ ಬಾವಿಗಳ ಮುಖಾಂತರ ಉದ್ಯಾನವನಗಳಿಗೆ ಮತ್ತು ಸಾರ್ವಜನಿಕರಿಗೆ ಕುಡಿಯುವ ನೀರು ಸರಬರಾಜು ಮಾಡುವುದು ಹಾಗೂ ಕಾರಂಜಿಗಳ ವಾರ್ಷಿಕ ನಿರ್ವಹಣೆಯನ್ನು ದಿನಾಂಕ:1.9.2009 ರಿಂದ 31.8.2010ರವರೆಗೆ ಗುತ್ತಿಗೆ ಆಧಾರದ ಮೇಲೆ ನಿರ್ವಹಿಸಲು ಕರ್ನಾಟಕ ಮಾರಾಟ ತೆರಿಗೆ ಇಲಾಖೆಯಲ್ಲಿ ಮತ್ತು ಆದಾಯ ತೆರಿಗೆ ಇಲಾಖೆಯಲ್ಲಿ ಅಧಿಕೃತ ನೊಂದಣಿ (ಪ್ಯಾನ್ ನಂಬರ್ಸ್) ಹೊಂದಿರುವ ಕ್ಲಾಸ್–1 ವಿದ್ಯುತ್ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಟೆಂಡರ್ ಫಾರಂಗಳನ್ನು ದಿನಾಂಕ: 12.08.2009 ರಿಂದ 20.08.2009 ರವರೆಗೆ ರೂ.500/–ಗಳ ದರದಲ್ಲಿ ಮಾರಾಟ ಮಾಡಲಾಗುವುದು.

ಭರ್ತಿ ಮಾಡಿದ ಟೆಂಡರ್‌ಗಳನ್ನು ದಿನಾಂಕ: 21.8.2009 ರಂದು ಮಧ್ಯಾಹ್ನ 3.00 ಗಂಟೆಯೊಳಗೆ ಕಛೇರಿಗೆ ಸಲ್ಲಿಸುವುದು. ಟೆಂಡರ್‌ಗಳನ್ನು ಅದೇ ದಿನ ಸಂಜೆ 4.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯನ್ನು ಸಂಪರ್ಕಿಸಿ ವಿವರಗಳನ್ನು ಪಡೆಯುವುದು.

ಪಿ.ಆರ್. 614 ತೋಟಗಾರಿಕೆ ಉಪ ನಿರ್ದೇಶಕರು, ಲಾಲ್‌ಬಾಗ್ ಸಸ್ಯತೋಟ

## ವ್ಯವಸ್ಥಾಪಕರು, ಬೀಜೋತ್ಪಾದನಾ ಕೇಂದ್ರ, ಲಿಂಗದಹಳ್ಳಿ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ

### ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

**ನಂ. ಬೀಉಕೇಂ.ಲಿಂ/ ಆಡಳಿತ / ವಾಹನ / ಹರಾಜು/ 09–10, ದಿನಾಂಕ: 16ನೇ ಜುಲೈ 2009**

ಈ ಕಾರ್ಯಾಲಯದಲ್ಲಿರುವ ಒಂದು ಅನುಪಯುಕ್ತ ಟ್ರಾಕ್ಟರ್ ನಂ. ಸಿ.ಎ.ಜಿ. 5906 ಹೆಚ್.ಎಂ.ಟಿ. 1982 ಮಾಡಲ್ ಟ್ರಾಕ್ಟರ್ ಇದ್ದು, ಸದರಿ ವಾಹನವನ್ನು ಅನುಪಯುಕ್ತ ವಾಹನಗಳ ವಿಲೇವಾರಿ ಸಮಿತಿಯಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಶಿಫಾರಸ್ಸಿನಂತೆ ಅನುಪಯುಕ್ತ ವಾಹನವೆಂದು ಪರಿಗಣಿಸಿದೆ. ಸದರಿ ವಾಹನವನ್ನು ವಿಲೇ ಮಾಡಲು ಅನುಮತಿಸಿದ್ದು, ಅದರಂತೆ ಯಥಾ ಸ್ಥಿತಿಯಲ್ಲಿ ಕಛೇರಿ ಆವರಣದಲ್ಲಿದ್ದಂತೆ ಟ್ರಾಕ್ಟರ್ ನಂ. ಸಿ.ಎ.ಜಿ. 5906ರ ಇಂಜಿನ್ ಅನ್ನು ಪಾರದರ್ಶಕವಾಗಿ ಬಹಿರಂಗವಾಗಿ ಉಪ ಕೃಷಿ ನಿರ್ದೇಶಕರು, ಜಿಲ್ಲಾ ಕೃಷಿ ತರಬೇತಿ ಕೇಂದ್ರ, ಲಿಂಗದಹಳ್ಳಿ ಇವರ ಸಮಕ್ಷಮದಲ್ಲಿ ಟೆಂಡರ್ ಕಂ ಹರಾಜನ್ನು ದಿನಾಂಕ: 21.08.09 ರಂದು ಗಂಟೆ 4.00 ಗಂಟೆಗೆ ಕರೆಯಲಾಗಿದೆ. ಆಸಕ್ತರು ಬಹಿರಂಗ ಹರಾಜಿನಲ್ಲಿ ಸಕಾಲದಲ್ಲಿ ಭಾಗವಹಿಸಿ ಬಿಡ್ಡು ಮಾಡಬಹುದಾಗಿರುತ್ತದೆ. ಹಾಗೂ ಟೆಂಡರ್ ಸಲ್ಲಿಸುವವರು ಅವರ ದರ ನಮೂದಿಸಿ ಸೀಲು ಮಾಡಿದ ಲಕೋಟೆಯಲ್ಲಿ ದಿನಾಂಕ: 20.08.2009ರ ಸಮಯ 5.30 ರೊಳಗೆ ಕಛೇರಿ ವೇಳೆಯಲ್ಲಿ ಸಲ್ಲಿಸುವುದು.

**ವಿಶೇಷ ಸೂಚನೆ:**

1. ವಾಹನವನ್ನು ಆಸಕ್ತ ಬಿಡ್ಡುದಾರರು ಕಛೇರಿಯ ಆವರಣದಲ್ಲಿ ನೋಡಬಹುದಾಗಿದೆ.
2. ನಿಗದಿತ ಟೆಂಡರ್ ಫಾರಂ ಇರುವುದಿಲ್ಲ. ಟೆಂಡರ್‌ನಲ್ಲಿ ಸ್ಪಷ್ಟ ವಿಳಾಸ ವಿವರ ದರವನ್ನು ಸ್ಪಷ್ಟವಾಗಿ ನಮೂದಿಸುವುದು.
3. ಹರಾಜಿನ ಸಮಯದಲ್ಲಿ ಇ.ಎಂ.ಡಿ. ರೂ. 5,000–00 ಸಲ್ಲಿಸಿ ನಂತರ ಹರಾಜು ಕರೆಯತಕ್ಕದ್ದು. ಹರಾಜು ಮುಗಿದ ನಂತರ ಬಿಡ್ಡು ಕೂಗಿದವರ ಹೊರತು ಬಾಕಿಯವರ ಮುಂಗಡ ಹಿಂದಿರುಗಿಸಲಾಗುವುದು.
4. ಬಹಿರಂಗ ಹರಾಜು ಪ್ರಕ್ರಿಯೆ ಮುಗಿದ ನಂತರ ಸೀಲು ಮಾಡಿದ ಟೆಂಡರ್ ಲಕೋಟೆಗಳನ್ನು ತೆರೆಯಲಾಗುತ್ತದೆ. ಅತಿ ಹೆಚ್ಚಿನ ಹರಾಜು ಮೊತ್ತ, ಅಥವಾ ಹೆಚ್ಚಿನ ದರ ನಮೂದಿಸಿದ ಟೆಂಡರ್ ಬಿಡ್ಡುದಾರರಿಗೆ ವಾಹನ ವಿಲೇ ಮಾಡಲಾಗುತ್ತದೆ.
5. ಹರಾಜು ಮುಗಿದ ನಂತರ ಇಲಾಖಾ ಅನುಮತಿ ಪಡೆದು ವಾಹನವನ್ನು ಹರಾಜಾದ ಬಿಡ್ಡುದಾರರಿಗೆ ಬಿಡ್ಡಿನ ಹಣ ಪಡೆದು (ತೆರಿಗೆ ಸೇರಿ) ವಾಹನ ವಿತರಿಸಲಾಗುತ್ತದೆ.
6. ಹರಾಜಿನ ಮಾರ್ಪಾಡು ಇತರೆ ವಿಲೇ ಹಕ್ಕು ಅಂತಿಮವಾಗಿ ಈ ಕಛೇರಿಯ ಮುಖ್ಯಸ್ಥರಿಗೆ ಇರುತ್ತದೆ, ಹರಾಜಿನ ವಿಧೀ ವಿಧಾನಕ್ಕೆ ಎಲ್ಲಾ ಬಿಡ್ಡುದಾರರು ಬದ್ಧರಾಗಿರತಕ್ಕದ್ದು.

ವ್ಯವಸ್ಥಾಪಕರು,

ಪಿ.ಆರ್. 616 ಬೀಜೋತ್ಪಾದನಾ ಕೇಂದ್ರ, ಲಿಂಗದಹಳ್ಳಿ, ತರೀಕೆರೆ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ.

7. ಜನ್ಮ ದಿನಾಂಕದ ದೃಢೀಕರಣ ಪತ್ರ
8. ಜಾತಿ ಪ್ರಮಾಣ ಪತ್ರ.

**4.2 ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ :**

**ಅರಣ್ಯ ಸಂರಕ್ಷಣಾಧಿಕಾರಿಗಳು,**
**ಚಾಮರಾಜನಗರ ವೃತ್ತ,**
**ಸುಲ್ತಾನ್ ಷರೀಫ್ ವೃತ್ತ, ಸತ್ಯಮಂಗಲ ರಸ್ತೆ,**
**ಚಾಮರಾಜನಗರ – 571 313.**

**4.3 ಸ್ವೀಕೃತ ಅರ್ಜಿಗಳ ಪರಾಮರ್ಶೆ / ನೇಮಕಾತಿ ವಿಧಾನ :**

ಅರ್ಜಿ ಸ್ವೀಕರಿಸಿದ ನಂತರ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಸಮಿತಿಯ ಮುಂದೆ ಹಾಜರಾಗಲು ತಿಳಿಸಲಾಗುವುದು. ಅಭ್ಯರ್ಥಿಗಳಿಂದ ಆನೆಯ ಸಾಕಣೆಯ ಸಾಮರ್ಥ್ಯ ಮತ್ತು ಕನ್ನಡ ಭಾಷೆಯನ್ನು ಮಾತನಾಡುವ ಮತ್ತು ತಿಳಿದುಕೊಳ್ಳುವ ಸಾಮರ್ಥ್ಯಕ್ಕನುಗುಣವಾಗಿ ಆಯ್ಕೆ ಸಮಿತಿಯು (ಗರಿಷ್ಠ 100 ಅಂಕಗಳಿಗೆ) ಅಂಕಗಳನ್ನು ನೀಡಿ ಹಾಗೂ ಮೀಸಲಾತಿ ನಿಯಮಗಳನ್ನನುಸರಿಸಿ ಆಯ್ಕೆ ಪಟ್ಟಿಯನ್ನು ಸಿದ್ದಗೊಳಿಸಲಾಗುವುದು.

**4.4 ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.**

**5.0 ಆಯ್ಕೆಯಾದ ಅಭ್ಯರ್ಥಿಗಳ ಖಾಯಂಪೂರ್ವ / ಪರೀಕ್ಷಾರ್ಥ ಅವಧಿ ಹಾಗೂ ನಿಯುಕ್ತಿ:**

ಆಯ್ಕೆಯಾದ ಅಭ್ಯರ್ಥಿಗಳು 24 ತಿಂಗಳುಗಳು ಖಾಯಂಪೂರ್ವ/ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸತಕ್ಕದ್ದು.

ಆಯ್ಕೆಯಾದ ಅಭ್ಯರ್ಥಿಯು ಪ್ರಪ್ರಥಮವಾಗಿ ಅವರನ್ನು ನೇಮಕ ಮಾಡುವ ಸ್ಥಳದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

**6.0 ಮೂಲ ದಾಖಲಾತಿಗಳ ಪರಿಶೀಲನೆ :**

**6.1** ಮೀಸಲಾತಿ ವರ್ಗೀಕರಣ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನಕ್ಕೆ ಹಾಜರಾಗುವಾಗ ಸಂಬಂಧಿಸಿದ ಆಯ್ಕೆ ಸಮಿತಿಯ ಎದುರು ಹಾಜರುಪಡಿಸಬೇಕು.

ಅರ್ಹ ಅಭ್ಯರ್ಥಿಗಳು ಮೂಲ ದಾಖಲಾತಿಗಳ ಪರಿಶೀಲನಾ ಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಪ್ರಮಾಣ ಪತ್ರಗಳನ್ನು) ಮೀಸಲಾತಿ ವರ್ಗೀಕರಣ, ಇತ್ಯಾದಿ ದಾಖಲಾತಿ / ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ನಿಗದಿಪಡಿಸಲಾಗುವ ದಿನಾಂಕ ಮತ್ತು ಅಧಿಕಾರಿಗಳ ಎದುರು ತಪ್ಪದೇ ಹಾಜರುಪಡಿಸಬೇಕು ಹಾಗೂ ಇಂತಹ ದಾಖಲೆಗಳನ್ನು ಹಾಜರು ಪಡಿಸಲು ಕಾಲ ವಿಸ್ತರಣೆ ನೀಡಲಾಗುವುದಿಲ್ಲ.

**6..2** ವಿವಿಧ ಪ್ರವರ್ಗಗಳ ಅಡಿಯಲ್ಲಿ ಮೀಸಲಾತಿ ಕೋರಿದ ಅಭ್ಯರ್ಥಿಗಳು, ಮೂಲ ದಾಖಲೆಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರುಪಡಿಸದೇ ಇದ್ದ ಪಕ್ಷದಲ್ಲಿ ಅವರು ಕೋರಿರುವ ಮೀಸಲಾತಿಯನ್ನು ರದ್ದುಪಡಿಸಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಅವರನ್ನು ಪರಿಗಣಿಸಲಾಗುವುದು.

**6.3 ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿದ ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳ ವಿವರ:**

ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರವನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

**6.3.1** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ **"ನಮೂನೆ–ಡಿ"** ರಲ್ಲಿ.

**6.3.2** ಪ್ರವರ್ಗ–I ರ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ **"ನಮೂನೆ–ಇ"** ರಲ್ಲಿ.

**6.3.3** ಪ್ರವರ್ಗ–II(ಎ), II(ಬಿ), III(ಎ) ಮತ್ತು III(ಬಿ) ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ **"ನಮೂನೆ–ಎಫ್"** ರಲ್ಲಿ.

**ಸೂಚನೆ:** **"ನಮೂನೆ–ಎಫ್"** ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಒಂದು ವರ್ಷಕ್ಕಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು ಎಂಬುದನ್ನು ಅಭ್ಯರ್ಥಿಯು ಗಮನದಲ್ಲಿಡತಕ್ಕದ್ದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**6.3.4** ಯೋಜನಾ ನಿರಾಶ್ರಿತ ಮೀಸಲಾತಿ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು
ಸಂಬಂಧಪಟ್ಟ ತಹಶೀಲ್ದಾರ್‌ರಿಂದ ನಮೂನೆ–3 ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು.

**7.0 ಗಮನಿಸಬೇಕಾದ ಅಂಶಗಳು :**

**7.1** ಅಂಚೆ ಮೂಲಕ ಅಥವಾ ಇನ್ನಿತರೆ ಯಾವುದೇ ವ್ಯವಸ್ಥೆ ಮೂಲಕ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಹಾಗೂ ಅರ್ಜಿಗಳು ಮೇಲೆ ತಿಳಿಸಿರುವ ವಿಳಾಸಕ್ಕೆ ತಲುಪಲು ವಿಳಂಬವಾದರೆ ಇಲಾಖೆಯು ಜವಾಬ್ದಾರಿಯಲ್ಲ.

**7.2** ನಿಗದಿತ ನಮೂನೆಯಲ್ಲಿಲ್ಲದ ಅಥವಾ ಅಪೂರ್ಣ ಮಾಹಿತಿ ನೀಡಿದ ಅರ್ಜಿಗಳನ್ನು ಅನರ್ಹ ಅರ್ಜಿಗಳೆಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿಯು ತಿರಸ್ಕೃತವಾದ ಪಕ್ಷದಲ್ಲಿ ಅಥವಾ ಯಾವುದೇ ಸೌಲಭ್ಯದಿಂದ ವಂಚಿತರಾದ ಪಕ್ಷದಲ್ಲಿ ತತ್ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

**7.3** ಯಾವುದೇ ಅಭ್ಯರ್ಥಿಯು ಅರ್ಜಿ ಹಾಕುವ ಸಮಯದಲ್ಲಿ ರಾಜ್ಯ ಅಥವಾ ಕೇಂದ್ರ ಸರ್ಕಾರಿ ಇಲಾಖೆಯಲ್ಲಿ ಅಥವಾ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಖಾಯಂ ಅಥವಾ ತಾತ್ಕಾಲಿಕ ನೌಕರಿಯಲ್ಲಿದ್ದಲ್ಲಿ ಅರ್ಜಿಯನ್ನು ಸಂಬಂಧಿಸಿದ ಇಲಾಖೆ/ಸಂಸ್ಥೆ/ಪ್ರಾಧಿಕಾರದ ಮುಖಾಂತರ ಸಲ್ಲಿಸಬೇಕು.

**7.4** ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದ್ದಲ್ಲಿ ಅಂತಹ ಅಭ್ಯರ್ಥಿಯನ್ನು ಅನರ್ಹಗೊಳಿಸಲಾಗುವುದು.

**7.5** ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚಿನ ಅರ್ಜಿ ಭರ್ತಿ ಮಾಡಿ ಬೇರೆ ಬೇರೆ ಅರ್ಜಿಗಳಲ್ಲಿ ವಿಭಿನ್ನವಾದ ವಿವರಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**7.6** ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

**7.7** ಕಾನೂನು ಬಾಹಿರನೆಂದು ಸಂಸ್ಥೆ ಅಥವಾ ಸಂಘ ಘೋಷಿಸಲಾದ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

**7.8** ಅಭ್ಯರ್ಥಿಯು ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ, ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

**7.9** ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿ/ಪತಿಯರನ್ನು ಹೊಂದಿದ ಪುರುಷ / ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೆ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**7.10** ಅಭ್ಯರ್ಥಿಯು ನೇಮಕಾತಿ ಸಂದರ್ಶನಕ್ಕೆ ಬೇರೊಬ್ಬ ವ್ಯಕ್ತಿಯನ್ನು ತಮ್ಮ ಪರವಾಗಿ ಕಳುಹಿಸಿದ್ದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆ ಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

**7.11** ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ–ಎಸ್‌ಪಿಎಸ್–04–ಪಿಇಟಿ–2005 ದಿನಾಂಕ 31–03–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory pension scheme) ಗೆ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

**7.12** ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೆ ಇಟ್ಟುಕೊಳ್ಳಲು ಸೂಚಿಸಿದೆ.

**7.13** ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಅದನ್ನು ಇಲಾಖಾ ವೆಬ್‌ಸೈಟ್ **(www.karanatakaforest.gov.in)** ನಲ್ಲಿ ಪ್ರಕಟಿಸಲಾಗುವುದು.

**7.14** ಯಾವುದೇ ತಿಳುವಳಿಕೆ ದೊರೆಯದ ಅಭ್ಯರ್ಥಿಗಳು ನೇಮಕಾತಿಗೆ ಆಯ್ಕೆಯಾಗಿರುವುದಿಲ್ಲವೆಂದು ತಿಳಿಯುವುದು.

**7.15** ಆಯ್ಕೆಗೊಂಡು ನೇಮಕಾತಿ ಹೊಂದುವ ಅಭ್ಯರ್ಥಿಗಳು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಎಲ್ಲಾ ಸೇವಾ ನಿಯಮಗಳಿಗೆ ಒಳಪಡುತ್ತಾರೆ.

ಅರಣ್ಯ ಸಂರಕ್ಷಣಾಧಿಕಾರಿ
ಹಾಗೂ ಆನೆ ಕವಾಡಿ ನೇರ ನೇಮಕಾತಿ ಆಯ್ಕೆ ಪ್ರಾಧಿಕಾರಿ,
ಚಾಮರಾಜನಗರ ವೃತ್ತ, ಚಾಮರಾಜನಗರ.

ಪಿ.ಆರ್. 642

## ಅರಣ್ಯ ಇಲಾಖೆ
## ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ
## ಅಧಿಸೂಚನೆ

**ಸಡಸಂಖ್ಯೆ:ಎ1(ಬಿ5)ಸಿಬ್ಬಂದಿ–ಆಕ–ಸಿಆರ್–37/09–10, ದಿನಾಂಕ: 31ನೇ ಜುಲೈ 2009.**

**ವಿಷಯ:** 2009–10ನೇ ಸಾಲಿನಲ್ಲಿ ಶಿವಮೊಗ್ಗ ಅರಣ್ಯ ವೃತ್ತದಲ್ಲಿ ಆನೆ ಕವಾಡಿಗಳ ಹುದ್ದೆಗೆ ನೇರನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು.

**ಉಲ್ಲೇಖ:** ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು, (ಅರಣ್ಯ ಪಡೆ ಮುಖ್ಯಸ್ಥರು), ಬೆಂಗಳೂರು ಇವರ ಕಛೇರಿ ಪತ್ರ ಸಂಖ್ಯೆ:ಬಿ3–ಸಿಬ್ಬಂದಿ–ವಿವ–170/2000–01 ದಿನಾಂಕ:29–07–2009.

ಅರಣ್ಯ ಇಲಾಖೆಯ ಶಿವಮೊಗ್ಗ ಅರಣ್ಯ ವೃತ್ತದಲ್ಲಿ ಒಟ್ಟು 12(ಹನ್ನೆರಡು) ಆನೆ ಕವಾಡಿ ಹುದ್ದೆಗಳಿಗೆ ನೇರನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಿ ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಿದ ಅರ್ಜಿಗಳನ್ನು **"ಆನೆ ಕವಾಡಿ ಹುದ್ದೆಗೆ ಅರ್ಜಿ"** ಎಂದು ಕವರಿನ ಮೇಲೆ ಬರೆದು **ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವೃತ್ತ, ಹೊಳೆಹೊನ್ನೂರು ರಸ್ತೆ, ಶಿವಮೊಗ್ಗ–577203** ಇಲ್ಲಿಗೆ **ದಿನಾಂಕ:20–08–2009ರ** ಸಾಯಂಕಾಲ 5.30 ಗಂಟೆಗೆ ಅಥವಾ ಅದಕ್ಕಿಂತ ಮುಂಚಿತವಾಗಿ ಅರ್ಜಿಗಳನ್ನು ಸ್ವೀಕರಿಸಲಾದ ಅರ್ಜಿಗಳಿಗೆ ಯಾವುದೇ ತರಹದ ಸ್ವೀಕೃತಿ ಪತ್ರ ನೀಡಲಾಗುವುದಿಲ್ಲ. ಅರ್ಜಿ ನಮೂನೆ ಮಾದರಿಯನ್ನು ಅಧಿಸೂಚನೆಯೊಂದಿಗೆ ಪ್ರತ್ಯೇಕವಾಗಿ ಲಗತ್ತಿಸಿದೆ.

ಒಟ್ಟು ಹುದ್ದೆಗಳು:– 12

ವೇತನ ಶ್ರೇಣಿ : 4800–100–6000–125–6500–150–7100–175–7275

ಹುದ್ದೆಗಳ ಮೀಸಲಾತಿ ವರ್ಗೀಕರಣ

ವಿಭಾಗ: ವನ್ಯಜೀವಿ ವಿಭಾಗ ಶಿವಮೊಗ್ಗ: 12 ಹುದ್ದೆ

| ಪ್ರವರ್ಗ ನೇರ ಮೀಸಲಾತಿ (Vertical Reservation) | ಸಮತಳ ಮೀಸಲಾತಿ (Horizontal Reservation) | | | | | | | ಒಟ್ಟು |
|---|---|---|---|---|---|---|---|---|
| | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ | ಮಾಜಿ ಸೈನಿಕ | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ | ಯೋಜನೆಯಿಂದ ನಿರಾಶ್ರಿತಗೊಂಡ ಅಭ್ಯರ್ಥಿ | |
| ಪರಿಶಿಷ್ಟ ಜಾತಿ | 1 | 1 | 1 | | | | | 03 |
| ಸಾಮಾನ್ಯ ಅರ್ಹತೆ | 2 | 2 | 1 | | | | | 05 |
| ಪರಿಶಿಷ್ಟ ಪಂಗಡ | 1 | – | – | | | | | 01 |
| ಪ್ರವರ್ಗ–I | – | – | – | | | | | |
| ಪ್ರವರ್ಗ–II (ಎ) | 1 | 1 | – | | | | | 02 |
| ಪ್ರವರ್ಗ–II (ಬಿ) | 1 | – | – | | | | | 01 |
| ಪ್ರವರ್ಗ–IIII (ಎ) | | | | | | | | |
| ಪ್ರವರ್ಗ–III(ಬಿ) | | | | | | | | |
| **ಒಟ್ಟು** | **6** | **4** | **2** | | | | | **12** |

**3.0 ಅರ್ಹತೆ ಮತ್ತು ನಿಬಂಧನೆ:**

**3.1 ಪೌರತ್ವ :–** ಈ ಕೆಳಗೆ ಕಾಣಿಸಿದ ವ್ಯಕ್ತಿಗಳು ಮಾತ್ರ ಈ ಅಧಿಸೂಚನೆಯಲ್ಲಿ ವಿವರಿಸಿದ ಹುದ್ದೆಗಳಿಗೆ ನೇಮಕಾತಿ ಹೊಂದಲು ಅರ್ಹರಾಗಿರುತ್ತಾರೆ.

(ಅ) ಭಾರತದ ಪೌರ. (ಆ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ 1962ರ ಜನವರಿ 1ನೇ ದಿನಾಂಕಕ್ಕೆ ಮೊದಲು ಭಾರತಕ್ಕೆ ಬಂದಿರುವ ಟಿಬೇಟಿಯನ್ಸ್ ನಿರಾಶ್ರಿತರು. (ಇ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ ಪಾಕಿಸ್ತಾನ, ಮಯಾನ್ಮಾರ್ (ಬರ್ಮಾ), ಶ್ರೀಲಂಕಾಪೂರ್ವ ಆಫ್ರಿಕಾದ ರಾಷ್ಟ್ರಗಳಾದ ಕೀನ್ಯಾ, ಉಗಾಂಡಾ, ತಾಂಜನೀಯ, ಸಂಯುಕ್ತ ಗಣರಾಜ್ಯ (ಹಿಂದಿನ ಟಾಂಗ್‌ನಿಕಾ, ಜಿಂಜೀಬಾರಾ) ಝಾಂಬಿಯಾ, ಮಾಲವಿ, ಜೈರ್, ಇಥಿಯೋಪಿಯಾ ಅಥವಾ ವಿಯೆಟ್ನಾಂ ಗಳಿಂದ ವಲಸೆ ಬಂದ ಭಾರತೀಯ ಮೂಲದ ವ್ಯಕ್ತಿ ( 'ಅ' ಯಿಂದ 'ಇ' ವರೆಗೆ ಕಾಣಿಸಿರುವ

ಅಭ್ಯರ್ಥಿಯು ವಲಸೆ ಬಂದ ಬಗ್ಗೆ ಅವನು ವಾಸಿಸುವ ಜಿಲ್ಲಾ ಸರಹದ್ದಿನ ಜಿಲ್ಲಾಧಿಕಾರಿ/ ಜಿಲ್ಲಾ ನ್ಯಾಯಾಧೀಶರಿಂದ ಪ್ರಮಾಣ ಪತ್ರ ಪಡೆದು ಒಪ್ಪಿಸಬೇಕು. ಇಲ್ಲದ ಪಕ್ಷದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ.

**(ಈ) ಕರ್ನಾಟಕ ರಾಜ್ಯದ ವ್ಯಾಪ್ತಿಯ ಅಧಿಸೂಚಿತ ಅರಣ್ಯದೊಳಗೆ ವಾಸಿಸುವರಾಗಿರತಕ್ಕದ್ದು.**

3.2 **ವಿದ್ಯಾರ್ಹತೆ:–** ಕನ್ನಡ ಭಾಷೆ ಮಾತನಾಡಲು ಮತ್ತು ತಿಳಿದುಕೊಳ್ಳಲು ಶಕ್ತರಾಗಿರಬೇಕು.

3.3 **ಅನುಭವ:–** ಆನೆ ನಿರ್ವಹಣೆಯಲ್ಲಿ ಅನುಭವ ಹೊಂದಿರುವುದು ಕಡ್ಡಾಯವಾಗಿರುತ್ತದೆ.

3.4 **ವಯೋಮಿತಿ:–**

ಕರ್ನಾಟಕ ನಾಗರೀಕ ಸೇವಾ ನಿಯಮಗಳು (ಸಾಮಾನ್ಯ ನೇಮಕಾತಿ)–1977ರ ನಿಯಮ 6 ರಂತೆ ಅರ್ಜಿ ಸಲ್ಲಿಸಲು ನೇಮಕಾತಿ ಬಗ್ಗೆ ಹೊರಡಿಸಿರುವ ಅಧಿಸೂಚನೆ ದಿನಾಂಕದಂದು ಅಭ್ಯರ್ಥಿಗೆ ಕನಿಷ್ಟ 18 ವರ್ಷ ವಯಸ್ಸಾಗಿರಬೇಕು. ಮತ್ತು ಈ ಕೆಳಕಂಡಂತೆ ಗರಿಷ್ಟ ವಯೋಮಿತಿ ಮೀರಿರಬಾರದು.

| | |
|---|---|
| ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ / ಪ್ರವರ್ಗ –1 | ಗರಿಷ್ಟ ವಯೋಮಿತಿ 40 ವರ್ಷಗಳು. |
| ಇತರ ಪ್ರವರ್ಗಗಳು ಅಂದರೆ 2(ಎ) ಅಥವಾ 2 (ಬಿ) ಅಥವಾ 3 (ಎ) ಅಥವಾ 3 (ಬಿ) | ಗರಿಷ್ಟ ವಯೋಮಿತಿ 38 ವರ್ಷಗಳು. |
| ಇತರೆ ಅಭ್ಯರ್ಥಿಗಳಿಗೆ | ಗರಿಷ್ಟ ವಯೋಮಿತಿ 35 ವರ್ಷಗಳು |

**3.5 ವೈದ್ಯಕೀಯ ಅರ್ಹತೆ:–**

ಅಭ್ಯರ್ಥಿಗಳು ಸರ್ಕಾರಿ ವೈದ್ಯಾಧಿಕಾರಿಗಳಿಂದ ವೈದ್ಯಕೀಯ ತಪಾಸಣೆ ನಡೆಸಿಕೊಂಡು ಅವರಿಂದ ವೈದ್ಯಕೀಯ ದೃಢೀಕರಣ ಪತ್ರ ಪಡೆದು ಸಂದರ್ಶನದ ವೇಳೆ ಸಲ್ಲಿಸತಕ್ಕದ್ದು.

**4.0 ಅರ್ಜಿಗೆ ಲಗತ್ತಿಸಬೇಕಾದ ದಾಖಲೆಗಳು:–** ಅರ್ಜಿಯೊಂದಿಗೆ ಈ ಕೆಳಗಿನ ದಾಖಲೆಗಳನ್ನು ಲಗತ್ತಿಸಬೇಕು.(ದೃಢೀಕೃತ ಪ್ರತಿಗಳನ್ನು ಮಾತ್ರ ಸಲ್ಲಿಸುವುದು)

1 ಸ್ವ ವಿಳಾಸವಿರುವ 10 X 22 ಅಳತೆಯ ಒಂದು ಲಕೋಟೆ (ಅಂಚೆ ಚೀಟಿ ಅಂಟಿಸುವ ಅಗತ್ಯವಿಲ್ಲ)
2 ಆನೆ ನಿರ್ವಹಣೆಯಲ್ಲಿ ಅನುಭವ ಹೊಂದಿರುವ ಬಗ್ಗೆ ವಲಯ ಅರಣ್ಯ ಅಧಿಕಾರಿ ಅಥವಾ ಅವರಿಗಿಂತ ಮೇಲ್ಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರದ ದೃಢೀಕೃತ ಪ್ರತಿ.
3 ಕರ್ನಾಟಕ ರಾಜ್ಯ ವ್ಯಾಪ್ತಿಯ ಅಧಿಸೂಚಿತ ಅರಣ್ಯದೊಳಗೆ ವಾಸ ಮಾಡುವವರೆಂಬ ಬಗ್ಗೆ ಸಂಬಂಧಿಸಿದ ತಹಶೀಲ್ದಾರ್‌ರಿಂದ ಪಡೆದ ದೃಢೀಕರಣ ಪತ್ರ.
4 ಸರ್ಕಾರಿ ವೈದ್ಯಾಧಿಕಾರಿಗಳು ನೀಡಿರುವ ವೈದ್ಯಕೀಯ ದೃಢೀಕರಣ ಪತ್ರ. (ದೈಹಿಕ ಅರ್ಹತೆ ಪ್ರಮಾಣ ಪತ್ರ)
5 ಬಹುಪತ್ನಿತ್ವ / ಬಹುಪತಿತ್ವ ಹೊಂದಿಲ್ಲದಿರುವ ಬಗ್ಗೆ ತಹಶೀಲ್ದಾರ್‌ರಿಂದ ಪಡೆದ ದೃಢೀಕರಣ ಪತ್ರ.
6 ಜನ್ಮ ದಿನಾಂಕದ ದೃಢೀಕರಣ ಪತ್ರ.
7 ಜಾತಿ ಪ್ರಮಾಣ ಪತ್ರ.

**4.1 ಸ್ವೀಕೃತ ಅರ್ಜಿಗಳ ಪರಾಮರ್ಶೆ / ನೇಮಕಾತಿ ವಿಧಾನ :**

ಅರ್ಜಿ ಸ್ವೀಕರಿಸಿದ ನಂತರ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಸಮಿತಿಯ ಮುಂದೆ ಹಾಜರಾಗಲು ತಿಳಿಸಲಾಗುವುದು. ಅಭ್ಯರ್ಥಿಗಳಿಂದ ಆನೆಯ ನಿರ್ವಹಣೆಯ ಸಾಮರ್ಥ್ಯ ಮತ್ತು ಕನ್ನಡ ಭಾಷೆಯನ್ನು ಮಾತನಾಡುವ ಮತ್ತು ತಿಳಿದುಕೊಳ್ಳುವ ಸಾಮರ್ಥ್ಯಕ್ಕನುಗುಣವಾಗಿ ಆಯ್ಕೆ ಸಮಿತಿಯು (ಗರಿಷ್ಠ 100 ಅಂಕಗಳಿಗೆ) ಅಂಕಗಳನ್ನು ನೀಡಿ ಹಾಗೂ ಮೀಸಲಾತಿ ನಿಯಮಗಳನ್ನನುಸರಿಸಿ ಆಯ್ಕೆ ಪಟ್ಟಿಯನ್ನು ಸಿದ್ದಗೊಳಿಸಲಾಗುವುದು.

**4.2 ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.**

**4.3 ಆಯ್ಕೆಯಾದ ಅಭ್ಯರ್ಥಿಗಳ ಖಾಯಂಪೂರ್ವ / ಪರೀಕ್ಷಾರ್ಥ ಅವಧಿ ಹಾಗೂ ನಿಯುಕ್ತಿ:**

ಆಯ್ಕೆಯಾದ ಅಭ್ಯರ್ಥಿಗಳು 24 ತಿಂಗಳುಗಳು ಖಾಯಂಪೂರ್ವ/ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸತಕ್ಕದ್ದು.

ಆಯ್ಕೆಯಾದ ಅಭ್ಯರ್ಥಿಯು ಪ್ರಪ್ರಥಮವಾಗಿ ಅವರನ್ನು ನೇಮಕ ಮಾಡುವ ಸ್ಥಳದಲ್ಲಿ ಕನಿಷ್ಟ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

**5.0 ಮೂಲ ದಾಖಲಾತಿಗಳ ಪರಿಶೀಲನೆ :**

**5.1** ಮೀಸಲಾತಿ ವರ್ಗೀಕರಣ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನಕ್ಕೆ ಹಾಜರಾಗುವಾಗ ಸಂಬಂಧಿಸಿದ ಆಯ್ಕೆ ಸಮಿತಿಯ ಎದುರು ಹಾಜರುಪಡಿಸಬೇಕು.

ಅರ್ಹ ಅಭ್ಯರ್ಥಿಗಳು ಮೂಲ ದಾಖಲಾತಿಗಳ ಪರಿಶೀಲನಾ ಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ವಯಸ್ಸು, (ಜನ್ಮ ದಿನಾಂಕ ತಿಳಿಯಲು ಪ್ರಮಾಣ ಪತ್ರಗಳನ್ನು) ಮೀಸಲಾತಿ ವರ್ಗೀಕರಣ, ಇತ್ಯಾದಿ

ದಾಖಲಾತಿ / ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ನಿಗದಿಪಡಿಸಲಾಗುವ ದಿನಾಂಕ ಮತ್ತು ಅಧಿಕಾರಿಗಳ ಎದುರು ತಪ್ಪದೇ ಹಾಜರುಪಡಿಸಬೇಕು ಹಾಗೂ ಇಂತಹ ದಾಖಲೆಗಳನ್ನು ಹಾಜರು ಪಡಿಸಲು ಕಾಲ ವಿಸ್ತರಣೆ ನೀಡಲಾಗುವುದಿಲ್ಲ.

**5.2** ವಿವಿಧ ಪ್ರವರ್ಗಗಳ ಅಡಿಯಲ್ಲಿ ಮೀಸಲಾತಿ ಕೋರಿದ ಅಭ್ಯರ್ಥಿಗಳು, ಮೂಲ ದಾಖಲೆಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರುಪಡಿಸದೇ ಇದ್ದ ಪಕ್ಷದಲ್ಲಿ ಅವರು ಕೋರಿರುವ ಮೀಸಲಾತಿಯನ್ನು ರದ್ದುಪಡಿಸಿ, ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಅವರನ್ನು ಪರಿಗಣಿಸಲಾಗುವುದು.

**5.3 ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿದ ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳ ವಿವರ:**

ವಿವಿಧ ಪ್ರವರ್ಗಗಳ ಅಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರವನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

**5.3.1** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ "ನಮೂನೆ–ಡಿ" ರಲ್ಲಿ.

**5.3.2** ಪ್ರವರ್ಗ–I ರ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ "ನಮೂನೆ–ಇ" ರಲ್ಲಿ.

**5.3.3** ಪ್ರವರ್ಗ–II(ಎ), II(ಬಿ), III(ಎ) ಮತ್ತು III(ಬಿ) ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್ ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ "ನಮೂನೆ–ಎಫ್" ರಲ್ಲಿ.

**ಸೂಚನೆ:** "ನಮೂನೆ–ಎಫ್" ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ ಒಂದು ವರ್ಷಕ್ಕಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು ಎಂಬುದನ್ನು ಅಭ್ಯರ್ಥಿಯು ಗಮನದಲ್ಲಿಡತಕ್ಕದ್ದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

**5.3.4** ಯೋಜನಾ ನಿರಾಶ್ರಿತ ಮೀಸಲಾತಿ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು
ಸಂಬಂಧಪಟ್ಟ ತಹಶೀಲ್ದಾರ್‌ರಿಂದ ನಮೂನೆ–3 ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು.

**6.0 ಗಮನಿಸಬೇಕಾದ ಅಂಶಗಳು :**

**6.1** ಕೊನೆಯ ದಿನಾಂಕ ಅಂದರೆ 20–08–2009ರ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಹಾಗೂ ಅರ್ಜಿಗಳು ಮೇಲೆ ತಿಳಿಸಿರುವ ವಿಳಾಸಕ್ಕೆ ತಲುಪಲು ವಿಳಂಬವಾದರೆ ಇಲಾಖೆಯು ಜವಾಬ್ದಾರಿಯಲ್ಲ.

**6.2** ನಿಗದಿತ ನಮೂನೆಯಲ್ಲಿಲ್ಲದ ಅಥವಾ ಅಪೂರ್ಣ ಮಾಹಿತಿ ನೀಡಿದ ಅರ್ಜಿಗಳನ್ನು ಅನರ್ಹ ಅರ್ಜಿಗಳೆಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿಯು ತಿರಸ್ಕೃತವಾದ ಪಕ್ಷದಲ್ಲಿ ಅಥವಾ ಯಾವುದೇ ಸೌಲಭ್ಯದಿಂದ ವಂಚಿತರಾದ ಪಕ್ಷದಲ್ಲಿ ತತ್ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

**6.3** ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದ್ದಲ್ಲಿ ಅಂತಹ ಅಭ್ಯರ್ಥಿಯನ್ನು ಅನರ್ಹಗೊಳಿಸಲಾಗುವುದು.

**6.4** ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚಿನ ಅರ್ಜಿ ಭರ್ತಿ ಮಾಡಿ ಬೇರೆ ಬೇರೆ ಅರ್ಜಿಗಳಲ್ಲಿ ವಿಭಿನ್ನವಾದ ವಿವರಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**6.5** ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

**6.6** ಕಾನೂನು ಬಾಹಿರನೆಂದು ಸಂಸ್ಥೆ ಅಥವಾ ಸಂಘ ಘೋಷಿಸಲಾದ ಸದಸ್ಯರಾಗಿದ್ದರೆ ಅಥವಾ ಇನ್ನಾವುದೇ ರೀತಿಯಲ್ಲಿ ಅಂತಹ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

**6.7** ಅಭ್ಯರ್ಥಿಯು ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ, ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

**6.8** ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿ/ಪತಿಯರನ್ನು ಹೊಂದಿದ ಪುರುಷ/ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೆ ನೇಮಕಾತಿಗೆ ಅರ್ಹರಾಗಿರುವುದಿಲ್ಲ.

**6.9** ಅಭ್ಯರ್ಥಿಯು ನೇಮಕಾತಿ ಸಂದರ್ಶನಕ್ಕೆ ಬೇರೊಬ್ಬ ವ್ಯಕ್ತಿಯನ್ನು ತಮ್ಮ ಪರವಾಗಿ ಕಳುಹಿಸಿದ್ದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಅಥವಾ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅಸತ್ಯ ವಿವರಗಳನ್ನು ನೀಡಿದಲ್ಲಿ ಅಥವಾ ಸತ್ಯ ವಿಷಯಗಳನ್ನು ಮರೆ ಮಾಚಿದ ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದಲ್ಲಿ ಅಥವಾ

ಪ್ರಯತ್ನಿಸಿದಲ್ಲಿ ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977 ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

6.10 ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ–ಎಸ್‌ಪಿಎಸ್–04–ಪಿಇಟಿ–2005 ದಿನಾಂಕ 31–03–2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory pension scheme) ಗೆ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

6.11 **ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೆ ಇಟ್ಟುಕೊಳ್ಳಲು ಸೂಚಿಸಿದೆ.**

6.12 ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಅದನ್ನು ಇಲಾಖಾ ವೆಬ್‌ಸೈಟ್ (www.karanatakaforest.gov.in) ನಲ್ಲಿ ಪ್ರಕಟಿಸಲಾಗುವುದು.

**6.13** ಯಾವುದೇ ತಿಳುವಳಿಕೆ ದೊರೆಯದ ಅಭ್ಯರ್ಥಿಗಳು ನೇಮಕಾತಿಗೆ ಆಯ್ಕೆಯಾಗಿರುವುದಿಲ್ಲವೆಂದು ತಿಳಿಯುವುದು.

**6.14** ಆಯ್ಕೆಗೊಂಡು ನೇಮಕಾತಿ ಹೊಂದುವ ಅಭ್ಯರ್ಥಿಗಳು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಎಲ್ಲಾ ಸೇವಾ ನಿಯಮಗಳಿಗೆ ಒಳಪಡುತ್ತಾರೆ.

ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ.

## ಆನೆ ಕವಾಡಿ ಹುದ್ದೆಗೆ ಅರ್ಜಿ

## APPLICATION FORM FOR THE POST OF ELEPHANT KAVADI

ಪ್ರಕಟಣೆ ಸಂಖ್ಯೆ: ಎ1 **ಸಿಬ್ಬಂದಿ/ಆನೆಕವಾಡಿ/ಸಿಆರ್ 37/2009–10 ದಿನಾಂಕ: 31–7–2009**

| | |
|---|---|
| ಕನ್ನಡ ಅಥವಾ ಆಂಗ್ಲ ಭಾಷೆಯ ಸ್ಪಷ್ಟ ಅಕ್ಷರಗಳಲ್ಲಿ ಭರ್ತಿ ಮಾಡಿ<br>Fill Legibly in English (Capitals) or Kannada letters only<br>ಯಾವುದೇ ಅರ್ಜಿ ಶುಲ್ಕ ಇರುವುದಿಲ್ಲ. There is no Application Fee.<br>ಯಾವುದೇ ಪ್ರಮಾಣ ಪತ್ರ ಲಗತ್ತಿಸುವಂತಿಲ್ಲ. No original document to be enclosed.<br>ಸೂಚನೆ: ಅರ್ಜಿಯೊಂದಿಗೆ ಸ್ವವಿಳಾಸವಿರುವ ಒಂದು ಲಕೋಟೆ | ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಅಂಟಿಸಿ<br>Affix Recent Passport Size Photograph |

1. ಅಭ್ಯರ್ಥಿಯ ಹೆಸರು
   Name of the Candidate ☐

2. ಲಿಂಗ / Sex — ಪುರುಷ Male ☐ ಮಹಿಳೆ Female ☐

3. ಜನ್ಮ ದಿನಾಂಕ/Date of Birth — ದಿನ / Day ☐☐ ತಿಂಗಳು / Month ☐☐ ವರ್ಷ / Year ☐☐☐☐

4. ಪತ್ರ ವ್ಯವಹಾರಕ್ಕಾಗಿ ಪೂರ್ಣ ವಿಳಾಸ
   Address for Correspondence ☐
   ಪಿನ್ ಕೋಡ್ / PIN CODE ☐☐☐☐☐☐

5. ವರ್ಗೀಕರಣ (ಅ) / Classification (A)
   ಸೂಕ್ತ ಅಂಕಣವನ್ನು ( ) ಟಿಕ್ ಮಾಡಿ

| | | |
|---|---|---|
| ☐ ಸಾಮಾನ್ಯ ವರ್ಗ General Merit | ☐ ಪ್ರವರ್ಗ– I Category – I | ☐ ಪ್ರವರ್ಗ–II(ಎ) Category–II(a) |
| ☐ ಪ್ರವರ್ಗ–II(ಬಿ) Category–II(b) | ☐ ಪ್ರವರ್ಗ–III(ಎ) Category–III(a) | ☐ ಪ್ರವರ್ಗ–III(ಬಿ) Category–III(b) |
| ☐ ಪರಿಶಿಷ್ಟ ಜಾತಿ SC | ☐ ಪರಿಶಿಷ್ಟ ಪಂಗಡ ST | |

6. ವರ್ಗೀಕರಣ (ಆ) / Classification (B) ಸೂಕ್ತ ಅಂಕಣವನ್ನು ( )ಟಿಕ್ ಮಾಡಿ ☐ ಮಾಜಿ ಸೈನಿಕರು Ex-Serviceman ☐ ಯೋಜನೆ ನಿರಾಶ್ರಿತರೆ Project Displaced

7. ಅರಣ್ಯದಲ್ಲಿ ವಾಸಿಸುವ ಪರಿಶಿಷ್ಟ ಪಂಗಡದವರಾಗಿದ್ದರೆ, ಜಾತಿಯ ಹೆಸರನ್ನು ನಮೂದಿಸಿ.
Do you belong to any of the forest dwelling Scheduled tribes, if so, mention the caste. ☐

8. ಆನೆ ನಿರ್ವಹಣೆಯಲ್ಲಿ ಹೊಂದಿರುವ ಅನುಭವ (ವರ್ಷಗಳಲ್ಲಿ)
No. of Years of Experience in handling Elephants ☐☐ ವರ್ಷಗಳು/ತಿಂಗಳುಗಳು

ಮೇಲಿನ ಮಾಹಿತಿಗಳು ಸತ್ಯವಾಗಿವೆ ಎಂದು ಪ್ರಮಾಣ ಮಾಡುತ್ತೇನೆ.

Place / ಸ್ಥಳ: ಅಭ್ಯರ್ಥಿಯ ಸಹಿ

Date / ದಿನಾಂಕ: Signature of the Candidate

**ಅರಣ್ಯ ಇಲಾಖೆ**

**ಪತ್ರಿಕಾ ಪ್ರಕಟಣೆ**

ಅರಣ್ಯ ಇಲಾಖೆಯ ಶಿವಮೊಗ್ಗ ಅರಣ್ಯ ವೃತ್ತದಲ್ಲಿ ಹನ್ನೆರಡು (12) ಆನೆ ಕವಾಡಿಗಳ ಹುದ್ದೆಗಳಿಗೆ ನೇರನೇಮಕಾತಿಗಾಗಿ ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) ನಿಯಮಗಳು 2003 ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ:ಎಫ್ಇಇ 258 ಎಫ್ಇಜಿ 2008 ದಿನಾಂಕ:9–3–2009 ರಲ್ಲಿ ಹೊರಡಿಸಿರುವ ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) ನಿಯಮಗಳ ಪ್ರಕಾರ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿ ಪ್ರತ್ಯೇಕವಾಗಿ ದಿನಾಂಕ: 31–07–2009 ರಂದು ಅಧಿಸೂಚನೆಯನ್ನು ಈ ಕಛೇರಿಯಿಂದ ಹೊರಡಿಸಲಾಗಿದೆ.

**ಹುದ್ದೆಗಳ ವಿವರ ಈ ಕೆಳಗಿನ ಪಟ್ಟಿಯಲ್ಲಿ ನಮೂದಿಸಿದೆ.**

| ವಿಭಾಗ | ಹುದ್ದೆ | ಕೆಲಸ ನಿರ್ವಹಿಸಬೇಕಾದ ಸ್ಥಳ |
|---|---|---|
| ವನ್ಯಜೀವಿ ವಿಭಾಗ, ಶಿವಮೊಗ್ಗ | 12 ಆನೆ ಕವಾಡಿ ಹುದ್ದೆಗಳು | ಸಕ್ರೆಬೈಲು ಆನೆ ಕ್ಯಾಂಪ್ ಗಾಜನೂರು |

<u>ವಿದ್ಯಾರ್ಹತೆ:</u> ಕನ್ನಢ ಭಾಷೆ ಮಾತನಾಡಲು ಮತ್ತು ತಿಳಿದುಕೊಳ್ಳಲು ಶಕ್ತರಾಗಿರಬೇಕು.

<u>ಅನುಭವ:</u> ಆನೆ ನಿರ್ವಹಣೆಯಲ್ಲಿ ಅನುಭವ ಹೊಂದಿರುವುದು ಕಡ್ಡಾಯವಾಗಿರುತ್ತದೆ.

<u>ಅರ್ಹತೆ:</u> ಕರ್ನಾಟಕ ರಾಜ್ಯದ ವ್ಯಾಪ್ತಿಯ ಅಧಿಸೂಚಿತ ಅರಣ್ಯದೊಳಗೆ ವಾಸಿಸುವವರಾಗಿತಕ್ಕದ್ದು.

<u>ಅರ್ಜಿನಮೂನೆ:</u> ಅರ್ಜಿಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ಮತ್ತು ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯಲ್ಲಿ ಪಡೆಯಬಹುದಾಗಿರುತ್ತದೆ. ಅರ್ಜಿ ಶುಲ್ಕ ಇರುವುದಿಲ್ಲ.

**1. ಅರ್ಜಿಗಳನ್ನು ಸಲ್ಲಿಸಲು ಕೊನೆಯ ದಿನಾಂಕ : 20–08–2009.**
**2. ಅರ್ಜಿಗಳ ಪರಿಶೀಲನೆಯ ಕೊನೆಯ ದಿನಾಂಕ : 24–08–2009.**
**3. ಅಭ್ಯರ್ಥಿಗಳ ಸಂದರ್ಶನ ದಿನಾಂಕ : 01–09–2009.**
**4. ತಾತ್ಕಾಲಿಕ ಆಯ್ಕೆ ಪಟ್ಟಿ ಪ್ರಕಟಣೆ ದಿನಾಂಕ : 03–09–2009.**
**5. ಅಂತಿಮ ಆಯ್ಕೆ ಪಟ್ಟಿ ಪ್ರಕಟಣೆ ದಿನಾಂಕ : 07–09–2009**

ಅರ್ಜಿಗಳನ್ನು ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವೃತ್ತ, ಹೊಳೆಹೊನ್ನೂರು ರಸ್ತೆ, ಶಿವಮೊಗ್ಗ–577203 ಇಲ್ಲಿಗೆ ಸಲ್ಲಿಸಬೇಕು.

ಪಿ.ಆರ್. 643 ಅರಣ್ಯ ಸಂರಕ್ಷಣಾಧಿಕಾರಿ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅರಣ್ಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ:ಸಿಬ್ಬಂದಿ/ ವಿವ–14/ಆಕ/2008–09 ದಿನಾಂಕ: 1ನೇ ಆಗಸ್ಟ್ 2009**

**ಆನೆ ಕವಾಡಿ ಹುದ್ದೆಗೆ ನೇರ ನೇಮಕಾತಿ.**

ಅರಣ್ಯ ಇಲಾಖೆಯಲ್ಲಿ 54 ಆನೆ ಕವಾಡಿ (48 ನೇರ ನೇಮಕಾತಿ & 6 ಬ್ಯಾಕ್ ಲಾಗ್) ಹುದ್ದೆಗಳಿಗೆ ಕರ್ನಾಟಕ ಅರಣ್ಯ ಸೇವೆಗಳು (ನೇಮಕಾತಿ) ನಿಯಮಗಳು, 2003ರಂತೆ ಹಾಗೂ ಸರ್ಕಾರದ ಅಧಿಸೂಚನೆ FEE 258 FEG 2008

ದಿನಾಂಕ:09–03–2009ರಲ್ಲಿ ಹೊರಡಿಸಿರುವ (ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು 2008) ಪ್ರಕಾರ ಸರ್ಕಾರ ಆದೇಶ ಸಂ:ಅಪಜೀ/274/ಅಅಸೇ/209 ದಿನಾಂಕ:27.7.09 & ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರ ಪತ್ರ ಸಂಖ್ಯೆ:ಬಿ3/ಸಿಬ್ಬಂದಿ/ವಿವ–170/00–01 ದಿ:29.7.2009ರ ನಿರ್ದೇಶನಗಳಂತೆ ನೇರ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳಿಂದ ಕೊಡಗು ವೃತ್ತದ ಮಡಿಕೇರಿ ವಿಭಾಗದಲ್ಲಿ ಖಾಲಿ ಇರುವ 18 ಆನೆ ಕವಾಡಿ ಹುದ್ದೆಗಳಿಗೆ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಹ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಅರಣ್ಯ ಸಂರಕ್ಷಣಾಧಿಕಾರಿಗಳು, ಕೊಡಗು ವೃತ್ತ, ಅರಣ್ಯಭವನ, ಮಡಿಕೇರಿ. ಇಲ್ಲಿಗೆ **ದಿನಾಂಕ:20.8.2009ರಂದು ಅಪರಾಹ್ನ 4.00ಘಂಟೆ** ಅಥವಾ ಅದಕ್ಕೂ ಮುಂಚಿತವಾಗಿ ಅಂಚೆ ಮೂಲಕ ಅಥವಾ ಖುದ್ದಾಗಿ ತಲುಪಿಸುವುದು.

**<u>ವಿಶೇಷ ಸೂಚನೆ :</u>** ಅಂಚೆ ಮೂಲಕ ಕೊನೆಯ ದಿನಾಂಕದ ನಂತರ ಸ್ವೀಕೃತವಾದ ಅರ್ಜಿಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ ಹಾಗೂ ಅಭ್ಯರ್ಥಿಗಳು ಭರ್ತಿ ಮಾಡಿದ ಅರ್ಜಿಗಳನ್ನು ಸಾಧಾರಣ ಅಂಚೆ ಮುಖಾಂತರ ಮಾತ್ರ ಮೇಲ್ಕಂಡ ಕಚೇರಿ ವಿಳಾಸಕ್ಕೆ ಕಳುಹಿಸಬಹುದು **ಯಾವುದೇ ಕಾರಣಕ್ಕೂ ಕೊರಿಯರ್ ನೊಂದಾಯಿತ ಅಂಚೆ, ಇತ್ಯಾದಿ ವಿಧಾನಗಳ ಮುಖಾಂತರ ಕಳುಹಿಸಿದ ಅರ್ಜಿಗಳನ್ನು ಸ್ವೀಕರಿಸುವ ವ್ಯವಸ್ಥೆ ಇರುವುದಿಲ್ಲ**. ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೇ ಕೆಲಸದ ದಿನವು ಅರ್ಜಿಯನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**1.0 ಹುದ್ದೆಗಳ ವಿವರ:**

**ಹುದ್ದೆಯ ಹೆಸರು : ಆನೆ ಕವಾಡಿ**

ವೇತನ ಶ್ರೇಣಿ:ರೂ.4800–100–6000–125–6500–150–7100–175–7275

| ಕ್ರಸಂ | ಅರಣ್ಯ ವಿಭಾಗಗಳು | ಹುದ್ದೆಗಳ ಸಂಖ್ಯೆ |
|---|---|---|
| 1 | ಮಡಿಕೇರಿ ವಿಭಾಗ | 18 |
| | **ಒಟ್ಟು** | **18 ಸಂಖ್ಯೆ** |

**2.0 ಮಡಿಕೇರಿ ವಿಭಾಗದಲ್ಲಿನ 18 ಹುದ್ದೆಗಳ ಮೀಸಲಾತಿ ವರ್ಗೀಕರಣ :**

| ಪ್ರವರ್ಗ ನೇರ ಮೀಸಲಾತಿ (Vertical Reservation) | ಸಮತಳ ಮೀಸಲಾತಿ (Horizontal Reservation) | | | | | | | **ಒಟ್ಟು** | ಷರಾ |
|---|---|---|---|---|---|---|---|---|---|
| | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ * | ಮಾಜಿ ಸೈನಿಕ | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | | |
| ಸಾಮಾನ್ಯ ಅರ್ಹತೆ | 3 | 3 | 3 | – | – | – | – | **9** | |
| ಪರಿಶಿಷ್ಟ ಜಾತಿ | 1 | 1 | – | – | – | – | – | **2** | |
| ಪರಿಶಿಷ್ಟ ಪಂಗಡ | 1 | – | – | – | – | – | – | **1** | |
| ಪ್ರವರ್ಗ–I | 1 | – | – | – | – | – | – | **1** | |
| ಪ್ರವರ್ಗ–II (ಎ) | 1 | 1 | – | – | – | – | – | **2** | |
| ಪ್ರವರ್ಗ–II (ಬಿ) | 1 | – | – | – | – | – | – | **1** | |
| ಪ್ರವರ್ಗ–III (ಎ) | 1 | – | – | – | – | – | – | **1** | |
| ಪ್ರವರ್ಗ–III (ಬಿ) | 1 | – | – | – | – | – | – | **1** | |
| **ಒಟ್ಟು** | **10** | **5** | **3** | | | | | **18** | |

(3) ಸರ್ಕಾರದ ಅಧಿಸೂಚನೆ ಸಂಖ್ಯೆ–ಡಿಪಿಎಆರ್–52/ಎಸ್ ಆರ್ ಆರ್/99 ದಿನಾಂಕ 08–11–2002 ರ ಆದೇಶದಲ್ಲಿ ಅಂಗವಿಕಲ ಅಭ್ಯರ್ಥಿಯ ಮೀಸಲಾತಿ ಕುರಿತಂತೆ ಅರಣ್ಯ ಇಲಾಖೆಗೆ ಸಂಬಂಧಿಸಿದಂತೆ ಆನೆ ಕಾವಡಿ ಹುದ್ದೆಯ ನೇಮಕಾತಿಯಲ್ಲಿ ಅಂಗವಿಕಲರಿಗೆ ಮೀಸಲಾತಿ ಅವಕಾಶ ಕಲ್ಪಿಸದೇ ಇರುವುದರಿಂದ ಅಂಗವಿಕಲ ಮೀಸಲಾತಿ ಬಿಂದುವನ್ನು ಇತರೆ ಸಮತಳ ಮೀಸಲಾತಿ ಅಡಿಯಲ್ಲಿ ಸೇರಿಸಲಾಗಿದೆ.

(4) ಮೇಲ್ಕಂಡಂತೆ ಹಂಚಿಕೆ ಮಾಡಿರುವ ಹುದ್ದೆಗಳು ಹೆಚ್ಚು ಕಡಿಮೆಯಾಗುವ ಸಾಧ್ಯತೆಗೆ ಒಳಪಟ್ಟಿರುತ್ತದೆ.

**3.0 ಅರ್ಹತೆ ಮತ್ತು ನಿಬಂಧನೆ**

3.1 **ಪೌರತ್ವ** : ಈ ಕೆಳಗೆ ಕಾಣಿಸಿದ ವ್ಯಕ್ತಿಗಳು ಮಾತ್ರ ನೇಮಕಾತಿ ಕೋರಿ ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

ಅ) ಭಾರತದ ಪೌರ

ಆ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ 1962ರ ಜನವರಿ 1 ನೇ ದಿನಾಂಕಕ್ಕೆ ಮೊದಲು ಭಾರತಕ್ಕೆ ಬಂದಿರುವ ಟಿಬೆಟಿಯನ್ ನಿರಾಶ್ರಿತರು.

ಇ) ಭಾರತದಲ್ಲಿ ಖಾಯಂ ಆಗಿ ನೆಲೆಸುವ ಉದ್ದೇಶದಿಂದ ಪಾಕಿಸ್ತಾನ, ಮ್ಯಾನ್ಮಾರ್ (ಹಿಂದಿನ ಬರ್ಮಾ) ಶ್ರೀಲಂಕಾ, ಪೂರ್ವ ಆಫ್ರಿಕದ ರಾಷ್ಟ್ರಗಳಾದ, ಕಿನ್ಯಾ, ಉಗಾಂಡಾ, ತಾಂಜಾನಿಯಾ ಸಂಯುಕ್ತ ಗಣರಾಜ್ಯ (ಹಿಂದಿನ ಟಾಂಗನಿಕಾ, ಜಂಜೀಬಾರ), ಝಾಂಬಿಯಾ, ಮಲಾವಿ, ಜೈರ್ ಇಥಿಯೋಪಿಯಾ ಅಥವಾ ವಿಯೆಟ್ನಾಂಗಳಿಂದ ವಲಸೆ ಬಂದ ಭಾರತೀಯ ಮೂಲದ ವ್ಯಕ್ತಿ.

('ಅ' ಯಿಂದ 'ಇ' ವರೆಗೆ ಕಾಣಿಸಿರುವ ಅಭ್ಯರ್ಥಿಯು ವಲಸೆ ಬಂದ ಬಗ್ಗೆ ಅವರು ವಾಸಿಸುವ ಜಿಲ್ಲಾ ಸರಹದ್ದಿನ ಜಿಲ್ಲಾಧಿಕಾರಿ ಅಥವಾ ಜಿಲ್ಲಾ ನ್ಯಾಯಾಧೀಶರಿಂದ ಪ್ರಮಾಣ ಪತ್ರ ಪಡೆದು ಒಪ್ಪಿಸಬೇಕು. ಇಲ್ಲದ ಪಕ್ಷದಲ್ಲಿ ನೇಮಕಾತಿಗೆ ಅರ್ಹರಾಗುವುದಿಲ್ಲ)

ಈ) ಕರ್ನಾಟಕ ರಾಜ್ಯದ ವ್ಯಾಪ್ತಿಯ ಅಧಿಸೂಚಿತ ಅರಣ್ಯದೊಳಗೆ ವಾಸಿಸುವವರಾಗಿರತಕ್ಕದ್ದು.

**3.2 ವಿದ್ಯಾರ್ಹತೆ**

ಕನ್ನಡ ಭಾಷೆ ಮಾತನಾಡಲು ಮತ್ತು ತಿಳಿದುಕೊಳ್ಳಲು ಶಕ್ತರಾಗಿರಬೇಕು.

**3.3 ಅನುಭವ**

ಆನೆಯ ಉಸ್ತುವಾರಿ ಮತ್ತು ಪೋಷಣೆಯ ಅನುಭವ ಹೊಂದಿರುವುದು ಕಡ್ಡಾಯವಾಗಿರುತ್ತದೆ.

**3.4 ವಯೋಮಿತಿ**

ಅಧಿಸೂಚನೆಯ ದಿನಾಂಕಕ್ಕೆ ಅಭ್ಯರ್ಥಿಯು **ಕನಿಷ್ಟ 18 ವರ್ಷ** ವಯಸ್ಸನ್ನು ಪೂರೈಸಿರತಕ್ಕದ್ದು.

ಅಧಿಸೂಚನೆಯ ದಿನಾಂಕಕ್ಕೆ ಗರಿಷ್ಟ ವಯೋಮಿತಿ ವಿವರಗಳು ಕೆಳಗಿನಂತಿದೆ.

| | |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ1 | ಗರಿಷ್ಟ ವಯೋಮಿತಿ 40 ವರ್ಷಗಳು |
| ಪ್ರವರ್ಗ IIA, IIB, III A, III B | ಗರಿಷ್ಟ ವಯೋಮಿತಿ 38 ವರ್ಷಗಳು |
| ಇತರೆ | ಗರಿಷ್ಟ ವಯೋಮಿತಿ 35 ವರ್ಷಗಳು |

**3.5 ವೈದ್ಯಕೀಯ ಅರ್ಹತೆ**

ಅಭ್ಯರ್ಥಿಗಳನ್ನು ಸರ್ಕಾರಿ ವೈದ್ಯಾಧಿಕಾರಿಗಳಿಂದ ವೈದ್ಯಕೀಯ ತಪಾಸಣೆ ನಡೆಸಿಕೊಂಡು ಅವರಿಂದ ವೈದ್ಯಕೀಯ ಧೃಡಪತ್ರ ಪಡೆದು ಸಂದರ್ಶನದ ವೇಳೆ ಸಲ್ಲಿಸತಕ್ಕದ್ದು.

**4.0 ಅರ್ಜಿ ನಮೂನೆ**

ಈ ಅಧಿಸೂಚನೆಯೊಂದಿಗೆ ಪ್ರಕಟಿಸಿರುವ ಅರ್ಜಿ ನಮೂನೆಯಲ್ಲಿ ಅಭ್ಯರ್ಥಿಗಳು ಅರ್ಜಿಯನ್ನು ಬೆರಳಚ್ಚು/ ಕಂಪ್ಯೂಟರ್ ಪ್ರಿಂಟ್ ಮಾಡಿಸಿ, ಭರ್ತಿ ಮಾಡಿದ ಅರ್ಜಿಯನ್ನು ಸಲ್ಲಿಸುವುದು.

4.1 ಅರ್ಜಿಯ ಜೊತೆಗೆ ಸಲ್ಲಿಸಬೇಕಾದ ದಾಖಲೆಗಳು: (ದೃಢೀಕೃತ ಪ್ರತಿಗಳನ್ನು ಮಾತ್ರ ಸಲ್ಲಿಸುವುದು)

ಸ್ವವಿಳಾಸವಿರುವ 10 x 22 ಸೆ.ಮಿ ಅಳತೆಯ ಒಂದು ಲಕೋಟೆ (ಅಂಚೆ ಚೀಟಿ ಅಂಟಿಸುವ ಅಗತ್ಯವಿಲ್ಲ)

<u>**ಸೂಚನೆ:**</u>– ಮೂಲ ದಾಖಲಾತಿಗಳು/ ಮೂಲ ಪ್ರಮಾಣ ಪತ್ರ ಇತ್ಯಾದಿಗಳನ್ನು ಅರ್ಜಿಯ ಜೊತೆ ಸಲ್ಲಿಸುವ ಅಗತ್ಯವಿಲ್ಲ.

ಆನೆ ಉಸ್ತುವಾರಿ ಮತ್ತು ಪೋಷಣೆಯ ಅನುಭವ ಹೊಂದಿರುವ ಬಗ್ಗೆ ವಲಯ ಅರಣ್ಯಾಧಿಕಾರಿ ಅಥವಾ ಅವರಿಗಿಂತ ಮೇಲ್ಪಟ್ಟ ಅಧಿಕಾರಿಗಳಿಂದ ಪಡೆದ ಪ್ರಮಾಣ ಪತ್ರದ ದೃಢೀಕೃತ ಪ್ರತಿ.

ಕರ್ನಾಟಕ ರಾಜ್ಯ ವ್ಯಾಪ್ತಿಯ ಅಧಿಸೂಚಿತ ಅರಣ್ಯದೊಳಗೆ ವಾಸ ಮಾಡುವವರೆಂಬ ಬಗ್ಗೆ ಸಂಬಂಧಿಸಿದ ತಹಸೀಲ್ದಾರರಿಂದ ಪಡೆದ ದೃಢೀಕರಣ ಪತ್ರ.

ಸರ್ಕಾರಿ ವೈದ್ಯಾಧಿಕಾರಿಗಳು ನೀಡಿರುವ ವೈದ್ಯಕೀಯ ದೃಢೀಕೃತ ಪತ್ರ (ದೈಹಿಕ ಅರ್ಹತೆ ಪ್ರಮಾಣ ಪತ್ರ)

ಬಹುಪತಿತ್ವ/ ಬಹುಪತ್ನಿತ್ವ ಹೊಂದಿಲ್ಲದಿರುವ ಬಗ್ಗೆ ತಹಸೀಲ್ದಾರರಿಂದ ಪಡೆದ ದೃಢೀಕರಣ ಪತ್ರ

ಜನ್ಮ ದಿನಾಂಕದ ದೃಢೀಕರಣ ಪತ್ರ

ಜಾತಿ ಪ್ರಮಾಣ ಪತ್ರ

**4.2 ಅರ್ಜಿಗಳನ್ನು ಸಲ್ಲಿಸಬೇಕಾದ ವಿಳಾಸ :** **ಅರಣ್ಯ ಸಂರಕ್ಷಣಾಧಿಕಾರಿ**
**ಕೊಡಗು ವೃತ್ತ , ಮಡಿಕೇರಿ**
**ಅರಣ್ಯ ಭವನ, ಮಡಿಕೇರಿ–571201.**

**4.3 ಸ್ವೀಕೃತ ಅರ್ಜಿಗಳ ಪರಾಮರ್ಶೆ/ ನೇಮಕಾತಿ ವಿಧಾನ :**

ಅರ್ಜಿ ಸ್ವೀಕರಿಸಿದ ನಂತರ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಸಮಿತಿಯ ಮುಂದೆ ಹಾಜರಾಗಲು ತಿಳಿಸಲಾಗುವುದು. ಅಭ್ಯರ್ಥಿಗಳಿಂದ ಆನೆ ಉಸ್ತುವಾರಿ ಮತ್ತು ಪೋಷಣೆಯ ಸಾಮರ್ಥ್ಯ ಮತ್ತು ಕನ್ನಡ ಭಾಷೆಯನ್ನು ಮಾತನಾಡುವ ಮತ್ತು ತಿಳಿದುಕೊಳ್ಳುವ ಸಾಮರ್ಥ್ಯಕ್ಕನುಗುಣವಾಗಿ ಆಯ್ಕೆ ಸಮಿತಿಯು (ಗರಿಷ್ಟ 100 ಅಂಕಗಳಿಗೆ) ಅಂಕಗಳನ್ನು ನೀಡಿ ಹಾಗೂ ಮೀಸಲಾತಿ ನಿಯಮಗಳನನ್ನುಸರಿಸಿ ಆಯ್ಕೆ ಪಟ್ಟಿಯನ್ನು ಸಿದ್ಧಗೊಳಿಸಲಾಗುವುದು.

4.4 ಅಭ್ಯರ್ಥಿಗಳು ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

5.0 ಆಯ್ಕೆಯಾದ ಅಭ್ಯರ್ಥಿಗಳು 24 ತಿಂಗಳುಗಳು ಖಾಯಂ ಪೂರ್ವ/ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸತಕ್ಕದ್ದು.

ಆಯ್ಕೆಯಾದ ಅಭ್ಯರ್ಥಿಯು ಪ್ರಪ್ರಥಮವಾಗಿ ಅವರನ್ನು ನೇಮಕ ಮಾಡುವ ಸ್ಥಳದಲ್ಲಿ ಕನಿಷ್ಟ 5 ವರ್ಷಗಳ ಸೇವೆಯನ್ನು ಪೂರೈಸತಕ್ಕದ್ದು.

6.0 ಮೂಲ ದಾಖಲಾತಿಗಳ ಪರಿಶೀಲನೆ

6.1 ಮೀಸಲಾತಿ ವರ್ಗೀಕರಣ ಹಾಗೂ ಇತರೆ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನಕ್ಕೆ ಹಾಜರಾಗುವಾಗ ಸಂಬಂಧಿಸಿದ ಆಯ್ಕೆ ಸಮಿತಿಯ ಎದುರು ಹಾಜರುಪಡಿಸಬೇಕು.

ಅರ್ಹ ಅಭ್ಯರ್ಥಿಗಳು ಮೂಲ ದಾಖಲಾತಿಗಳ ಪರಿಶೀಲನಾ ಸಂದರ್ಭದಲ್ಲಿ ಅರ್ಜಿಯಲ್ಲಿ ನಮೂದಿಸಿರುವ ಎಲ್ಲಾ ಮಾಹಿತಿಗಳಿಗೆ ಪೂರಕವಾಗಿ ವಯಸ್ಸು (ಜನ್ಮ ದಿನಾಂಕ ತಿಳಿಯಲು ಪ್ರಮಾಣ ಪತ್ರಗಳನ್ನು) ಮೀಸಲಾತಿ ವರ್ಗೀಕರಣ, ಇತ್ಯಾದಿ ದಾಖಲಾತಿ/ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ನಿಗದಿಪಡಿಸಲಾಗುವ ದಿನಾಂಕ ಮತ್ತು ಅಧಿಕಾರಿಗಳ ಎದುರು ತಪ್ಪದೇ ಹಾಜರುಪಡಿಸಬೇಕು ಹಾಗೂ ಇಂತಹ ದಾಖಲೆಗಳನ್ನು ಹಾಜರು ಪಡಿಸಲು ಕಾಲ ವಿಸ್ತರಣೆ ನೀಡಲಾಗುವುದಿಲ್ಲ.

6.2 ವಿವಿಧ ಪ್ರವರ್ಗಗಳ ಅಡಿಯಲ್ಲಿ ಮೀಸಲಾತಿ ಕೋರಿದ ಅಭ್ಯರ್ಥಿಗಳು, ಮೂಲ ದಾಖಲೆಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳನ್ನು ಹಾಜರುಪಡಿಸದೇ ಇದ್ದ ಪಕ್ಷದಲ್ಲಿ ಅವರು ಕೋರಿರುವ ಮೀಸಲಾತಿಯನ್ನು ರದ್ದುಪಡಿಸಿ ಸಾಮಾನ್ಯ ಅರ್ಹತೆಯ ಅಭ್ಯರ್ಥಿಯೆಂದು ಅವರನ್ನು ಪರಿಗಣಿಸಲಾಗುವುದು.

6.3 ವಿವಿಧ ಪ್ರವರ್ಗಗಳಡಿ ಮೀಸಲಾತಿ ಕೋರಿದ ಅಭ್ಯರ್ಥಿಗಳು ಸಲ್ಲಿಸಬೇಕಾದ ಪ್ರಮಾಣ ಪತ್ರಗಳ ವಿವರ:

ವಿವಿಧ ಪ್ರವರ್ಗಗಳಡಿ ಮೀಸಲಾತಿ ಕೋರಿ ಅರ್ಜಿ ಸಲ್ಲಿಸುವವರು ಜಾತಿ ಪ್ರಮಾಣ ಪತ್ರವನ್ನು ಈ ಕೆಳಕಂಡ ನಮೂನೆಗಳಲ್ಲಿ ಹೊಂದಿರಬೇಕು.

6.3.1 ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ "ನಮೂನೆ ಡಿ" ರಲ್ಲಿ.

6.3.2 ಪ್ರವರ್ಗ– I ರ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ "ನಮೂನೆ–ಇ" ರಲ್ಲಿ.

6.3.3 ಪ್ರವರ್ಗ– II (ಎ) II (ಬಿ), III (ಎ) ಮತ್ತು III (ಬಿ) ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರವರಿಂದ ನೀಡಲಾದ ಜಾತಿ ಪ್ರಮಾಣ ಪತ್ರ ನಮೂನೆ " ಎಫ್" ರಲ್ಲಿ.

**ಸೂಚನೆ:** "ನಮೂನೆ– ಎಫ್" ಪ್ರಮಾಣ ಪತ್ರವು ಅಧಿಸೂಚನೆಯ ದಿನಾಂಕಕ್ಕೆ **ಒಂದು ವರ್ಷಕ್ಕಿಂತ ಹೆಚ್ಚು ಹಳೆಯ ಸಮಯದ್ದಾಗಿರಬಾರದು** ಎಂಬುದನ್ನು ಅಭ್ಯರ್ಥಿಯು ಗಮನದಲ್ಲಿಡತಕ್ಕದ್ದು. ಅವಧಿ ಮೀರಿದ ಪ್ರಮಾಣ ಪತ್ರವನ್ನು ಪರಿಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ.

6.3.4 ಯೋಜನಾ ನಿರಾಶ್ರಿತ ಮೀಸಲಾತಿ ವರ್ಗೀಕರಣದಲ್ಲಿ ಮೀಸಲಾತಿ ಕೋರಿರುವ ಅಭ್ಯರ್ಥಿಗಳು ಸಂಬಂಧಪಟ್ಟ ತಹಶೀಲ್ದಾರ್‌ರಿಂದ ನಮೂನೆ–3 ರಲ್ಲಿ ನೀಡಿರುವ ಪ್ರಮಾಣ ಪತ್ರವನ್ನು ಹಾಜರು ಪಡಿಸಬೇಕು.

**7.0 ಗಮನಿಸಬೇಕಾದ ಅಂಶಗಳು**

7.1 ಅಂಚೆ ಮೂಲಕ ಅಥವಾ ಇನ್ನಿತರೆ ಯಾವುದೇ ವ್ಯವಸ್ಥೆ ಮೂಲಕ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ ಹಾಗೂ ಅರ್ಜಿಗಳು ಮೇಲೆ ತಿಳಿಸಿರುವ ವಿಳಾಸಕ್ಕೆ ತಲುಪಲು ವಿಳಂಬವಾದರೆ ಇಲಾಖೆಯು ಜವಬ್ದಾರಿಯಲ್ಲ.

7.2 ನಿಗದಿತ ನಮೂನೆಯಲ್ಲಿಲ್ಲದೆ ಅಥವಾ ಅಪೂರ್ಣ ಮಾಹಿತಿ ನೀಡಿದ ಅರ್ಜಿಗಳನ್ನು ಅನರ್ಹ ಅರ್ಜಿಗಳೆಂದು ಪರಿಗಣಿಸಿ ತಿರಸ್ಕರಿಸಲಾಗುವುದು. ಅಭ್ಯರ್ಥಿಯು ಅರ್ಜಿಯನ್ನು ಸಮರ್ಪಕವಾಗಿ ತುಂಬದೇ ಸದರಿ ಅರ್ಜಿಯು ತಿರಸ್ಕೃತವಾದ ಪಕ್ಷದಲ್ಲಿ ಅಥವಾ ಯಾವುದೇ ಸೌಲಭ್ಯದಿಂದ ವಂಚಿತರಾದ ಪಕ್ಷದಲ್ಲಿ ತತ್ಸಂಬಂಧ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

7.3 ಯಾವುದೇ ಅಭ್ಯರ್ಥಿಯು ಅರ್ಜಿ ಹಾಕುವ ಸಮಯದಲ್ಲಿ ರಾಜ್ಯ ಅಥವಾ ಕೇಂದ್ರ ಸರ್ಕಾರಿ ಇಲಾಖೆಯಲ್ಲಿ ಅಥವಾ ಸಂಸ್ಥೆಗಳಲ್ಲಿ ಅಥವಾ ಪ್ರಾಧಿಕಾರದಲ್ಲಿ ಖಾಯಂ ಅಥವಾ ತಾತ್ಕಾಲಿಕ ನೌಕರಿಯಲ್ಲಿದ್ದಲ್ಲಿ ಅರ್ಜಿಯನ್ನು ಸಂಬಂಧಿಸಿದ ಇಲಾಖೆ/ ಸಂಸ್ಥೆ/ಪ್ರಾಧಿಕಾರದ ಮುಖಾಂತರ ಸಲ್ಲಿಸಬೇಕು.

7.4 ಯಾವುದೇ ಅಭ್ಯರ್ಥಿಯು ತನ್ನ ಆಯ್ಕೆಗೆ ಸಂಬಂಧಿಸಿದಂತೆ ಬಾಹ್ಯ ಒತ್ತಡ ತರಲು ಪ್ರಯತ್ನಿಸಿದ್ದಲ್ಲಿ ಅಂತಹ ಅಭ್ಯರ್ಥಿಯನ್ನು ಅನರ್ಹಗೊಳಿಸಲಾಗುವುದು.

7.5 ಅಭ್ಯರ್ಥಿಯು ಒಂದೇ ಹುದ್ದೆಗೆ ಒಂದಕ್ಕಿಂತ ಹೆಚ್ಚಿನ ಅರ್ಜಿ ಭರ್ತಿ ಮಾಡಿ ಬೇರೆ ಬೇರೆ ಅರ್ಜಿಯಲ್ಲಿ ವಿಭಿನ್ನವಾದ ವಿವರಗಳನ್ನು ನಮೂದಿಸಿದ್ದಲ್ಲಿ ಅಂತಹ ಅಭ್ಯರ್ಥಿಯ ಎಲ್ಲಾ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

7.6 ಕರ್ನಾಟಕ ರಾಜ್ಯದ ಯಾವುದೇ ಸರ್ಕಾರಿ ಇಲಾಖೆ, ಕೇಂದ್ರ ಸರ್ಕಾರಿ ಇಲಾಖೆ ಅಥವಾ ಅರೆ ಸರ್ಕಾರಿ ಸ್ವಾಮ್ಯದ ಸಂಸ್ಥೆಯ ಸೇವೆಯಿಂದ ವಜಾಗೊಂಡಿರುವ ನೌಕರರು ನೇಮಕಾತಿಗೆ ಅರ್ಹರಲ್ಲ.

7.7 ಕಾನೂನು ಬಾಹಿರವಾದ ಸಂಸ್ಥೆ ಅಥವಾ ಸಂಘ ಎಂದು, ಘೋಷಿಸಲಾದ ಸಂಘ ಸದಸ್ಯರಾಗಿದ್ದರೆ ಅಥವಾ ಇನ್ಯಾವುದೇ ರೀತಿಯಲ್ಲಿ ಅಂತಹ ಸಂಘ ಸಂಸ್ಥೆಗಳೊಂದಿಗೆ ನಿಕಟ ಸಂಪರ್ಕ ಹೊಂದಿದ್ದರೆ ಅಂತಹ ವ್ಯಕ್ತಿ ನೇಮಕಾತಿಗೆ ಅರ್ಹರಾಗುವುದಿಲ್ಲ.

7.8 ಅಭ್ಯರ್ಥಿಯು ಸಮಾಜ ಘಾತುಕ ಕೃತ್ಯಗಳಲ್ಲಿ ತೊಡಗಿ ಅಪರಾಧಿಯಾಗಿದ್ದರೆ, ಅಂತಹ ವ್ಯಕ್ತಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

7.9 ಒಬ್ಬರಿಗಿಂತ ಹೆಚ್ಚು ಜೀವಂತ ಪತ್ನಿ/ ಪತಿಯರನ್ನು ಹೊಂದಿದ ಪುರುಷ/ ಮಹಿಳೆ ಅಭ್ಯರ್ಥಿಗಳು ಸರ್ಕಾರದ ಪೂರ್ವಾನುಮತಿ ಇಲ್ಲದೆ ನೇಮಕಾತಿಗೆ ಅರ್ಹರಾಗುವುದಿಲ್ಲ.

7.10 ಅಭ್ಯರ್ಥಿಯು ನೇಮಕಾತಿ ಸಂದರ್ಶನಕ್ಕೆ ಬೇರೊಬ್ಬ ವ್ಯಕ್ತಿಯನ್ನು ತಮ್ಮ ಪರವಾಗಿ ಕಳುಹಿಸಿದ್ದಲ್ಲಿ ಅಥವಾ ತಪ್ಪು ಮಾಹಿತಿಗಳನ್ನು ನಮೂದಿಸಿದ್ದಲ್ಲಿ ಕೃತ್ರಿಮ ಅಥವಾ ತಿದ್ದಿದ ದಾಖಲಾತಿಗಳನ್ನು ಅಥವಾ ಅನುಚಿತ ಮಾರ್ಗಗಳನ್ನು ಉಪಯೋಗಿಸಿದ್ದಲ್ಲಿ ಅಥವಾ ಪ್ರಯತ್ನಿಸಿದಲ್ಲಿ ಅನರ್ಹರೆಂದು ಪರಿಗಣಿಸಲಾಗುವುದು ಮತ್ತು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ಉಪ ನಿಯಮ 20 ರಂತೆ ಅಪರಾಧಿ ವ್ಯವಹರಣೆಗೆ ಒಳಪಡುವರು.

7.11 ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ–ಎಸ್‌ಪಿಎಸ್–04–ಪಿಇಟಿ–2005 ದಿನಾಂಕ 31.3.2006 ರಂತೆ ಅಂಶದಾಯಿ ನಿವೃತ್ತಿ ಯೋಜನೆ (Contributory Pension Scheme) ಗೆ ಆಯ್ಕೆಯಾದ ಅಭ್ಯರ್ಥಿಗಳು ಬದ್ಧರಾಗಿರುತ್ತಾರೆ.

7.12 ಅಭ್ಯರ್ಥಿಗಳು ತಮ್ಮ ಮಾಹಿತಿಗಾಗಿ ಭರ್ತಿ ಮಾಡಿ ಸಲ್ಲಿಸಿದ ಅರ್ಜಿಯ ಒಂದು ಜೆರಾಕ್ಸ್ ಪ್ರತಿಯನ್ನು ತಮ್ಮೊಂದಿಗೆ ತಪ್ಪದೇ ಇಟ್ಟುಕೊಳ್ಳಲು ಸೂಚಿಸಿದೆ.

7.13 ಪ್ರಕಟಿಸಲಾಗಿರುವ ಹುದ್ದೆಗಳ ಸಂಖ್ಯೆಯಲ್ಲಿ ಕಡಿತ ಅಥವಾ ಹೆಚ್ಚುವರಿ ಆದಲ್ಲಿ ಅದನ್ನು ಇಲಾಖಾ ವೆಬ್‌ಸೈಟ್ (www.karanataforest.gov.in) ನಲ್ಲಿ ಪ್ರಕಟಿಸಲಾಗುವುದು.

7.14 ಯಾವುದೇ ತಿಳುವಳಿಕೆ ದೊರೆಯದ ಅಭ್ಯರ್ಥಿಗಳು ನೇಮಕಾತಿಗೆ ಆಯ್ಕೆಯಾಗಿರುವುದಿಲ್ಲವೆಂದು ತಿಳಿಯುವುದು.

7.15 ಆಯ್ಕೆಗೊಂಡು ನೇಮಕಾತಿ ಹೊಂದುವ ಅಭ್ಯರ್ಥಿಗಳು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಎಲ್ಲಾ ಸೇವಾ ನಿಯಮಗಳಿಗೆ ಒಳಪಡುತ್ತಾರೆ.

7.16 ಸಾಮಾನ್ಯ ಪ್ರವರ್ಗ ಮತ್ತು ಇತರ ಪ್ರವರ್ಗಗಳಿಗೆ ಮೀಸಲಾದ ಅರ್ಹ ಅಭ್ಯರ್ಥಿಗಳು ಯಾರು ಸಹ, ನೇಮಕಾತಿ ಕೋರಿ ಅರ್ಜಿ ಸಲ್ಲಿಸದಿದ್ದ ಪಕ್ಷದಲ್ಲಿ, ಈ ಪ್ರವರ್ಗಗಳಿಗೆ ಮೀಸಲಾದ ಹುದ್ದೆಯನ್ನು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪ್ರವರ್ಗಕ್ಕೆ ಆದ್ಯತೆಯ ಮೇರೆಗೆ ನೇಮಕಾತಿ ಮಾಡಿಕೊಳ್ಳಲಾಗುವುದು.

ಅರಣ್ಯ ಸಂರಕ್ಷಣಾಧಿಕಾರಿ, ಕೊಡಗು ವೃತ್ತ, ಮಡಿಕೇರಿ.

# ಆನೆ ಕವಾಡಿ ಹುದ್ದೆಗೆ ಅರ್ಜಿ

## APPLICATION FORM FOR THE POST OF ELEPHANT KAVADI

**(ಪ್ರಕಟಣೆ ಸಂಖ್ಯೆ: ಸಿಬ್ಬಂದಿ/ಸಿಆರ್–14/ಆಕಾ/08–09 ದಿನಾಂಕ: 1–8–2009)**

ಕನ್ನಡ ಅಥವಾ ಆಂಗ್ಲ ಭಾಷೆಯ ಸ್ಪಷ್ಟ ಅಕ್ಷರಗಳಲ್ಲಿ ಭರ್ತಿ ಮಾಡಿ
Fill Legibly in English (Capitals) or Kannada letters only

ಯಾವುದೇ ಅರ್ಜಿ ಶುಲ್ಕ ಇರುವುದಿಲ್ಲ. There is no Application Fee.
ಯಾವುದೇ ಮೂಲ ಪ್ರಮಾಣ ಪತ್ರ ಲಗತ್ತಿಸುವಂತಿಲ್ಲ. No original document to be enclosed.

ಸೂಚನೆ: ಅರ್ಜಿಯೊಂದಿಗೆ ಸ್ವವಿಳಾಸವಿರುವ ಒಂದು ಲಕೋಟೆ

ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ ಅಂಟಿಸಿ
Affix Recent Passport Size Photograph

1. ಅಭ್ಯರ್ಥಿಯ ಹೆಸರು
Name of the Candidate

2. ಲಿಂಗ / Sex — ಪುರುಷ Male ☐ ಮಹಿಳೆ Female ☐

3. ಜನ್ಮ ದಿನಾಂಕ/Date of Birth — ದಿನ / Day ☐☐ ತಿಂಗಳು / Month ☐☐ ವರ್ಷ / Year ☐☐☐☐

4. ಪತ್ರ ವ್ಯವಹಾರಕ್ಕಾಗಿ ಪೂರ್ಣ ವಿಳಾಸ
Address for Correspondence

ಪಿನ್ ಕೋಡ್ / PIN CODE ☐☐☐☐☐☐

5. ವರ್ಗೀಕರಣ (ಅ) / Classification (A)
ಸೂಕ್ತ ಅಂಕಣವನ್ನು ( ) ಟಿಕ್ ಮಾಡಿ

- ☐ ಸಾಮಾನ್ಯ ವರ್ಗ General Merit
- ☐ ಪ್ರವರ್ಗ– I Category – I
- ☐ ಪ್ರವರ್ಗ–II(ಎ) Category–II(a)
- ☐ ಪ್ರವರ್ಗ–III (ಬಿ) General Merit –III(b)
- ☐ ಪ್ರವರ್ಗ–III(ಎ) Category–III(a)
- ☐ ಪ್ರವರ್ಗ–III(ಬಿ) Category–III(b)
- ☐ ಪರಿಶಿಷ್ಟ ಜಾತಿ SC
- ☐ ಪರಿಶಿಷ್ಟ ಪಂಗಡ ST

6. ವರ್ಗೀಕರಣ (ಆ) / Classification (B)
ಸೂಕ್ತ ಅಂಕಣವನ್ನು ( )ಟಿಕ್ ಮಾಡಿ
☐ ಯೋಜನೆ ನಿರಾಶ್ರಿತರೆ Project Displaced

7. ಅರಣ್ಯದಲ್ಲಿ ವಾಸಿಸುವ ಪರಿಶಿಷ್ಟ ಪಂಗಡದವರಾಗಿದ್ದರೆ, ಜಾತಿಯ ಹೆಸರನ್ನು ನಮೂದಿಸಿ.
Do you belong to any of the forest dwelling Scheduled tribes, if so, mention the caste.

8. ಆನೆ ನಿರ್ವಹಣೆಯಲ್ಲಿ ಹೊಂದಿರುವ ಅನುಭವ (ವರ್ಷಗಳಲ್ಲಿ)
No. of Years of Experience in handling Elephants ☐☐ ವರ್ಷಗಳು/ತಿಂಗಳುಗಳು

ಮೇಲಿನ ಮಾಹಿತಿಗಳು ಸತ್ಯವಾಗಿವೆ ಎಂದು ಪ್ರಮಾಣ ಮಾಡುತ್ತೇನೆ.

Place / ಸ್ಥಳ: ಅಭ್ಯರ್ಥಿಯ ಸಹಿ

Date / ದಿನಾಂಕ: Signature of the Candidate

P.R. 632

## ಅರಣ್ಯ ಇಲಾಖೆ

## ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಕೊಡಗು ವೃತ್ತ, ಮಡಿಕೇರಿ

## ತಿದ್ದುಪಡಿ ಆದೇಶ

**ಸಂಖ್ಯೆ:ಸಿಬ್ಬಂದಿ/ವಿವ–14/ಆಕ/2008–09, ದಿನಾಂಕ: 4ನೇ ಆಗಸ್ಟ್ 2009**

**ವಿಷಯ:** ಆನೆ ಕವಾಡಿ ನೇರ ನೇಮಕಾತಿ ಅಧಿಸೂಚನೆಯನ್ನು ಪ್ರಕಟಿಸಿದ ಬಗ್ಗೆ.

**ಉಲ್ಲೇಖ:** ಈ ಕಛೇರಿ ಅಧಿಸೂಚನೆ ಪತ್ರ ಸಂಖ್ಯೆ:ಸಿಬ್ಬಂದಿ/ವಿವ–14/ ಆಕ/2008–09 ದಿನಾಂಕ:1.8.2009.

ಈ ಕಛೇರಿ ಅಧಿಸೂಚನೆ ಸಂಖ್ಯೆ:ಸಿಬ್ಬಂದಿ/ವಿವ–14/ಆಕಾ/2008–09, ದಿನಾಂಕ:1.8.2009ರಲ್ಲಿ ಹೊರಡಿಸಿರುವುದರಲ್ಲಿ ಈ ಕೆಳಗಿನ ತಿದ್ದುಪಡಿಗಳನ್ನು ಮಾಡಲಾಗಿದೆ.

1. ಪ್ರಕಟಣೆಯಲ್ಲಿ ಪ್ರಾರಂಭದಲ್ಲಿ "ಸರ್ಕಾರದ ಅಧಿಸೂಚನೆ ಎಫ್‌ಇಇ–258/ಎಫ್‌ಇಜಿ/2008, ದಿನಾಂಕ:03.10.2008ರಲ್ಲಿ ಹೊರಡಿಸಿರುವ ಕರಡು ನಿಯಮಗಳ (ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು, 2008)" ಎಂಬುದರ ಬದಲಾಗಿ

   "ಅರಣ್ಯ ಇಲಾಖೆಯಲ್ಲಿ 54 ಆನೆ ಕವಾಡಿ (48 ನೇರ ನೇಮಕಾತಿ & 6 ಬ್ಯಾಕ್ ಲಾಗ್) ಹುದ್ದೆಗಳಿಗೆ ಕರ್ನಾಟಕ ಅರಣ್ಯ ಸೇವೆಗಳು (ನೇಮಕಾತಿ) ನಿಯಮಗಳು, 2003ರಂತೆ ಹಾಗೂ ಸರ್ಕಾರದ ಅಧಿಸೂಚನೆ FEE 258 FEG 2008 ದಿನಾಂಕ:09–03–2009ರಲ್ಲಿ ಹೊರಡಿಸಿರುವ (ಕರ್ನಾಟಕ ಅರಣ್ಯ ಇಲಾಖಾ ಸೇವೆಗಳು (ನೇಮಕಾತಿ) (ತಿದ್ದುಪಡಿ) ನಿಯಮಗಳು 2008) ಪ್ರಕಾರ ಸರ್ಕಾರ ಆದೇಶ ಸಂ:ಅಪಜೀ/274/ಅಅಸೇ/209 ದಿನಾಂಕ:27.7.09 & ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಇವರ ಪತ್ರ ಸಂಖ್ಯೆ:ಬಿ3/ಸಿಬ್ಬಂದಿ/ವಿವ–170/00–01 ದಿ:29.7.2009ರ ನಿರ್ದೇಶನಗಳಂತೆ ನೇರ ನೇಮಕಾತಿಗಾಗಿ ಅರ್ಹ ಅಭ್ಯರ್ಥಿಗಳಿಂದ ಕೊಡಗು ವೃತ್ತದ ಮಡಿಕೇರಿ ವಿಭಾಗದಲ್ಲಿ ಖಾಲಿ ಇರುವ 18 ಆನೆ ಕವಾಡಿ ಹುದ್ದೆಗಳಿಗೆ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ" ಎಂದು ಓದಿಕೊಳ್ಳುವುದು.

2. ಮೇಲೆ ಹೇಳಿದ ಅಧಿಸೂಚನೆಯ ಅಂಶ 2.0 ರಲ್ಲಿ ಮಡಿಕೇರಿ ವಿಭಾಗದಲ್ಲಿನ 18 ಹುದ್ದೆಗಳ ಮೀಸಲಾತಿ ವರ್ಗೀಕರಣವನ್ನು ಅಲ್ಲಿ ಹೇಳಿರುವ ಬದಲಾಗಿ ರೋಸ್ಟರ್ ನಿಯಮಾವಳಿಗಳಂತೆ ಈ ಕೆಳಗಿನಂತೆ ಓದಿಕೊಳ್ಳುವುದು.

| ಪ್ರವರ್ಗ ನೇರ ಮೀಸಲಾತಿ (Vertical Reservation) | ಸಮತಳ ಮೀಸಲಾತಿ (Horizontal Reservation) | | | | | | | ಒಟ್ಟು | ಷರಾ |
|---|---|---|---|---|---|---|---|---|---|
| | ಇತರೆ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ ಅಭ್ಯರ್ಥಿ * | ಮಾಜಿ ಸೈನಿಕ | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | | |
| ಸಾಮಾನ್ಯ ಅರ್ಹತೆ | 3 | 3 | 3 | – | – | – | – | 9 | |
| ಪರಿಶಿಷ್ಟ ಜಾತಿ | 1 | 1 | – | – | – | – | – | 2 | |
| ಪರಿಶಿಷ್ಟ ಪಂಗಡ | 1 | – | – | – | – | – | – | 1 | |
| ಪ್ರವರ್ಗ–I | 1 | – | – | – | – | – | – | 1 | |
| ಪ್ರವರ್ಗ–II (ಎ) | 1 | 1 | – | – | – | – | – | 2 | |
| ಪ್ರವರ್ಗ–II (ಬಿ) | 1 | – | – | – | – | – | – | 1 | |
| ಪ್ರವರ್ಗ–III (ಎ) | 1 | – | – | – | – | – | – | 1 | |
| ಪ್ರವರ್ಗ–III (ಬಿ) | 1 | – | – | – | – | – | – | 1 | |
| **ಒಟ್ಟು** | **10** | **5** | **3** | | | | | **18** | |

1) ಸರ್ಕಾರದ ಅಧಿಸೂಚನೆ ಸಂಖ್ಯೆ–ಡಿಪಿಎಆರ್–52/ಎಸ್ ಆರ್ ಆರ್/99 ದಿನಾಂಕ 08–11–2002 ರ ಆದೇಶದಲ್ಲಿ ಅಂಗವಿಕಲ ಅಭ್ಯರ್ಥಿಯ ಮೀಸಲಾತಿ ಕುರಿತಂತೆ ಅರಣ್ಯ ಇಲಾಖೆಗೆ ಸಂಬಂಧಿಸಿದಂತೆ ಆನೆ ಕವಾಡಿ ಹುದ್ದೆಯ ನೇಮಕಾತಿಯಲ್ಲಿ ಅಂಗವಿಕಲರಿಗೆ ಮೀಸಲಾತಿ ಅವಕಾಶ ಕಲ್ಪಿಸದೇ ಇರುವುದರಿಂದ ಅಂಗವಿಕಲ ಮೀಸಲಾತಿ ಬಿಂದುವನ್ನು ಇತರೆ ಸಮತಳ ಮೀಸಲಾತಿ ಅಡಿಯಲ್ಲಿ ಸೇರಿಸಲಾಗಿದೆ.

2) ಮೇಲ್ಕಂಡಂತೆ ಹಂಚಿಕೆ ಮಾಡಿರುವ ಹುದ್ದೆಗಳು ಹೆಚ್ಚು ಕಡಿಮೆಯಾಗುವ ಸಾಧ್ಯತೆಗೆ ಒಳಪಟ್ಟಿರುತ್ತದೆ.

3. ಮೇಲೆ ಹೇಳಿದ ಅಧಿಸೂಚನೆಯ ಅಂಶ 3.4ರಲ್ಲಿ ವಯೋಮಿತಿಯನ್ನು ಅಲ್ಲಿ ಹೇಳಿರುವುದರ ಬದಲಾಗಿ ಈ ಕೆಳಗಿನಂತೆ ಓದಿಕೊಳ್ಳುವುದು.

| | |
|---|---|
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ1 | ಗರಿಷ್ಟ ವಯೋಮಿತಿ 40 ವರ್ಷಗಳು |
| ಪ್ರವರ್ಗ IIA, IIB, III A, III B | ಗರಿಷ್ಟ ವಯೋಮಿತಿ 38 ವರ್ಷಗಳು |
| ಇತರೆ | ಗರಿಷ್ಟ ವಯೋಮಿತಿ 35 ವರ್ಷಗಳು |

ಪಿ.ಆರ್. 650 ಅರಣ್ಯ ಸಂರಕ್ಷಣಾಧಿಕಾರಿ, ಕೊಡಗು ವೃತ್ತ, ಮಡಿಕೇರಿ.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ದಾವಣಗೆರೆ ವಿಭಾಗ, ದಾವಣಗೆರೆ.**

**ಮರು ಟೆಂಡರ್ ಪ್ರಕಟಣೆ**

**ಸಂ: ಬಿ1/ ಆ.ಪ್ರಾ/ ಸಂ.–ಉಪಹಾರ–ಗೃಹ–ಸಿ.ಆರ್: 17/ 09–10, ದಿನಾಂಕ: 25ನೇ ಜುಲೈ 2009.**

**ವಿಷಯ:** 2009–11ರ ಅವಧಿಗೆ ಆನಗೋಡು ಇಂದಿರಾ ಪ್ರಿಯದರ್ಶಿನಿ ಪ್ರಾಣಿ ಸಂಗ್ರಹಾಲಯದಲ್ಲಿ ಉಪಹಾರ ಗೃಹ ನಡೆಸುವ ಬಗ್ಗೆ.

ದಾವಣಗೆರೆ ವಿಭಾಗದ ವ್ಯಾಪ್ತಿಯಲ್ಲಿರುವ ಇಂದಿರಾ ಪ್ರಿಯದರ್ಶಿನಿ ಪ್ರಾಣಿ ಸಂಗ್ರಹಾಲಯ, ಆನಗೋಡು ಇಲ್ಲಿ 2009–11ನೇ ಸಾಲಿಗೆ ಸಸ್ಯಹಾರಿ ಉಪಹಾರ ಗೃಹ ನಡೆಸಲು ಪ್ರಸಕ್ತ ಸಾಲಿನಲ್ಲಿ ಈ ವಿಭಾಗದಲ್ಲಿ ನೊಂದಾಯಿತ ಗುತ್ತಿಗೆದಾರರಿಂದ ಹಾಗೂ ನುರಿತ ಹೋಟೆಲ್ ಉದ್ಯಮಿಗಳಿಂದ ಮರು ಟೆಂಡರ್‌ಗಳನ್ನು ದಿನಾಂಕ: 20–08–2009ರಂದು ಆಹ್ವಾನಿಸಲಾಗಿದೆ. ಟೆಂಡರ್‌ಗಳನ್ನು ಸದರಿ ದಿನದಂದು ಅಪರಾಹ್ನ 4.30 ಗಂಟೆಯವರೆಗೆ ಸ್ವೀಕರಿಸಿ ಅದೇ ದಿವಸ ಸಾಯಂಕಾಲ 5–00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ನ್ನು ತೆರೆಯಲಾಗುವುದು. ಟೆಂಡರ್ ನಮೂನೆ ಜೊತೆ ಇ.ಎಂ.ಡಿ. ರೂ. 2000/–ಗಳಿಗೆ ಬ್ಯಾಂಕ್ ಡಿ.ಡಿ. ಅಥವಾ ಪೇ ಆರ್ಡರ್ ಲಗತ್ತಿಸಬೇಕು. ತಪ್ಪಿತಸ್ಥ ಮತ್ತು ಕಪ್ಪು ಪಟ್ಟಿಯಲ್ಲಿರುವ ಗುತ್ತಿಗೆದಾರರು ಭಾಗವಹಿಸುವಂತಿಲ್ಲ.

**ಷರತ್ತುಗಳು**

1) ಗುತ್ತಿಗೆಯ ಅವಧಿಯ ಎರಡು ವರ್ಷಗಳು, ಅಂದರೆ ದಿನಾಂಕ: 01–09–2009 ರಿಂದ 30–06–2011.

2) ನಿಗದಿತ ಟೆಂಡರ್ ಫಾರಂಗಳನ್ನು ದಿನಾಂಕ: 20–08–2009ರಂದು ಮಧ್ಯಾಹ್ನ 1.30 ಘಂಟೆಯವರೆಗೆ ನೀಡಲಾಗುತ್ತದೆ. ಪ್ರತಿ ಟೆಂಡರ್ ಫಾರಂ ಬೆಲೆ ರೂ. 200/– ಮತ್ತು ಪ್ರಚಲಿತ ಚಾಲ್ತಿಯಲ್ಲಿರುವ ತೆರಿಗೆ ಸೇರಿ ಈ ಮೊಬಲಗನ್ನು ವಿಭಾಗ ಕಛೇರಿಯಲ್ಲಿ ಡಿ. ಡಿ. ಅಥವಾ ನಗದು ಮೂಲಕ ಪಾವತಿಸಿ ರಸೀದಿ ಪಡೆಯತಕ್ಕದ್ದು. ಮೊಹರಾದ ಟೆಂಡರ್‌ನ್ನು ದಿನಾಂಕ: 20–08–2009ರಂದು ಅಪರಾಹ್ನ 4.30 ಘಂಟೆಯವರೆಗೆ ಸ್ವೀಕರಿಸಿ ಅದೇ ದಿನ ಅಪರಾಹ್ನ 5.00 ಗಂಟೆಗೆ ತೆರೆಯಲಾಗುವುದು.

3) ಪ್ರತಿ ಟೆಂಡರ್‌ನ ಜೊತೆ ಇ.ಎಂ.ಡಿ.ಯನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ವಿಭಾಗ, ದಾವಣಗೆರೆ. ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ರೂ. 2000/–ರ ಡಿಮಾಂಡ್ ಡ್ರಾಫ್ಟ್‌ನ್ನು ಲಗತ್ತಿಸತಕ್ಕದ್ದು. ಟೆಂಡರ್‌ದಾರರೇ ಸ್ವತಃ ಟೆಂಡರ್ ಫಾರಂಗೆ ಸಹಿ ಹಾಕಬೇಕು. ಅವರ ಪರವಾಗಿ ದರ ನಮೂದಿಸಿ ಸಹಿ ಮಾಡಿ ಟೆಂಡರ್ ಫಾರಂ ಸಲ್ಲಿಸಲು ಬೇರೆ ಯಾರನ್ನಾದರೂ ಅಧಿಕೃತವಾಗಿ ನೇಮಿಸಿದಲ್ಲಿ ಅಂತಹವರಿಗೆ ಟೆಂಡರ್ ಫಾರಂನ್ನು ನೀಡಲಾಗುವುದು.

4) ಯಾವುದೇ ಕಾರಣದಿಂದ ಮೇಲ್ಕಂಡ ದಿನಾಂಕದಂದು ಟೆಂಡರ್ ಜರುಗದಿದ್ದಲ್ಲಿ ಮರು ಟೆಂಡರ್‌ನ್ನು ಮೇಲಿನ ಷರತ್ತುಗಳಿಗೊಳಪಟ್ಟಂತೆ ದಿನಾಂಕ: 20–09–2009ರಂದು ಅಪರಾಹ್ನ 4.30 ಗಂಟೆಗೆ ನಡೆಸಲಾಗುವುದು.

5) ಟೆಂಡರ್ ದರವನ್ನು ಅನುಮೋದಿಸಿದ ಬಗ್ಗೆ ಮಾಹಿತಿಯನ್ನು ಯಶಸ್ವಿ ಟೆಂಡರ್‌ದಾರರಿಗೆ ಅಂಚೆ ಮೂಲಕ ತಿಳಿಸಲಾಗುವುದು. ಈ ಮಾಹಿತಿ ತಿಳಿದ ಒಂದು ವಾರದೊಳಗಾಗಿ ಯಶಸ್ವಿ ಟೆಂಡರ್‌ದಾರರು ಈ ಕಛೇರಿಗೆ ಹಾಜರಾಗಿ ರೂ. 50.00 ಛಾಪಾ ಕಾಗದದಲ್ಲಿ ಕರಾರು ಪತ್ರವನ್ನು ಬರೆದು ಕೊಡತಕ್ಕದ್ದು.

6) ಯಶಸ್ವಿ ಟೆಂಡರ್‌ದಾರರು 30000/– ರೂ.ಗಳನ್ನು ಭದ್ರತಾ ಠೇವಣಿಯಾಗಿ ಇಡತಕ್ಕದ್ದು. ಸದರಿ ಮೊಬಲಗನ್ನು ರಾಷ್ಟ್ರೀಕೃತ ಬ್ಯಾಂಕಿನಿಂದ ಉಪ ಅರಣ್ಯ ಸಂರಕ್ಷಣಾಧಿಕಾರಿ, ಪ್ರಾದೇಶಿಕ ವಿಭಾಗ, ದಾವಣಗೆರೆ. ಇವರ ಹೆಸರಿಗೆ ಪಡೆದ ಡಿಮಾಂಡ್ ಡ್ರಾಫ್ಟ್ ಮೂಲಕ ಪಾವತಿಸತಕ್ಕದ್ದು.

7) ಉಪಹಾರ ಗೃಹ ನಡೆಸಲು ಅಗತ್ಯವಾದ ಪೀಠೋಪಕರಣಗಳು, ನೀರಿನ ಸರಬರಾಜು ವ್ಯವಸ್ಥೆ, ಆಹಾರ ಸಾಮಗ್ರಿ ಸರಬರಾಜು ಇತ್ಯಾದಿಗಳನ್ನು ಗುತ್ತಿಗೆದಾರರೇ ಒದಗಿಸಿಕೊಳ್ಳತಕ್ಕದ್ದು. ಇದಕ್ಕೆ ಇಲಾಖೆ ಯಾವ ರೀತಿಯ ಸಹಾಯ/

ಸಹಕಾರವನ್ನು ಒದಗಿಸುವುದಿಲ್ಲ. ಕಟ್ಟಡಕ್ಕೆ ಅಳವಡಿಸಿದ ವಿದ್ಯುತ್ ಸಂಪರ್ಕದ ಬಾಬ್ತು ಬಳಕೆ ಬಿಲ್ಲುಗಳನ್ನು ಗುತ್ತಿಗೆದಾರರೇ ಪಾವತಿಸತಕ್ಕದ್ದು.

8) ಟೆಂಡರ್‌ನಲ್ಲಿ ನಿಗಧಿಯಾದ ಬಾಡಿಗೆ ಮೊತ್ತವನ್ನು ಪ್ರತಿ ತಿಂಗಳು 5ನೇ ತಾರೀಖಿನೊಳಗೆ ವಲಯ ಅರಣ್ಯಾಧಿಕಾರಿಗಳು, ದಾವಣಗೆರೆ ವಲಯ, ದಾವಣಗೆರೆ. ರವರಲ್ಲಿ ಜಮಾ ಮಾಡತಕ್ಕದ್ದು.

9) ಗುತ್ತಿಗೆದಾರರು ಉಪಹಾರ ಗೃಹ ನಡೆಸಲು ನೇಮಿಸಿಕೊಳ್ಳುವ ಕಾರ್ಮಿಕರಿಗೆ ಪಾವತಿಸಬೇಕಾದ ಸಂಬಳ ಹಾಗೂ ಯಾವುದೇ ಪರಿಹಾರ ಇತ್ಯಾದಿಗಳನ್ನು ಕಾಯಿದೆ ಪ್ರಕಾರ ಪಾವತಿಸುವುದು ಗುತ್ತಿಗೆದಾರರ ಜವಾಬ್ದಾರಿಯಾಗಿದೆ. ಈ ಬಗ್ಗೆ ಇಲಾಖೆ ಯಾವುದೇ ಜವಾಬ್ದಾರಿಯನ್ನು ವಹಿಸುವುದಿಲ್ಲ. ಗುತ್ತಿಗೆದಾರರು ಬಾಲ ಕಾರ್ಮಿಕರನ್ನು ಕೆಲಸಕ್ಕಾಗಿ ನೇಮಿಸಿಕೊಳ್ಳತಕ್ಕದ್ದಲ್ಲ.

10) ಗುತ್ತಿಗೆದಾರರು ಈ ಗುತ್ತಿಗೆಯನ್ನು ಯಾವ ಕಾರಣಕ್ಕೂ ಉಪ ಗುತ್ತಿಗೆ ನೀಡುವಂತಿಲ್ಲ ಅಥವಾ ಹಸ್ತಾಂತರಿಸುವಂತಿಲ್ಲ. ಗುತ್ತಿಗೆದಾರರ ಬೇಡಿಕೆಯಂತೆ ಗುತ್ತಿಗೆಯನ್ನು ಬೇರೆಯವರಿಗೆ ವರ್ಗಾಯಿಸಬೇಕಾದರೆ ಅರಣ್ಯ ಸಂರಕ್ಷಣಾಧಿಕಾರಿಗಳು, ಬಳ್ಳಾರಿ ವೃತ್ತ, ಬಳ್ಳಾರಿ. ಅಥವಾ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸದಸ್ಯ ಕಾರ್ಯದರ್ಶಿ, ಕರ್ನಾಟಕ ಮೃಗಾಲಯ ಪ್ರಾಧಿಕಾರ, ಮೈಸೂರು. ರವರ ಅನುಮತಿಯನ್ನು ಪಡೆದು ಗುತ್ತಿಗೆ ದರದ ಶೇಕಡಾ 10ರಷ್ಟು ದರವನ್ನು ಸರ್ಕಾರಕ್ಕೆ ಜಮಾ ಮಾಡಿ ನಂತರ ವರ್ಗಾಯಿಸತಕ್ಕದ್ದು, ಈ ರೀತಿ ಉಪ ಗುತ್ತಿಗೆ ಪಡೆದವರು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಪ್ರಾದೇಶಿಕ ವಿಭಾಗ, ದಾವಣಗೆರೆ. ಇವರಲ್ಲಿ ಪ್ರತ್ಯೇಕ ಕರಾರು ಪತ್ರವನ್ನು ಬರೆದುಕೊಡತಕ್ಕದ್ದು.

11) ಗುತ್ತಿಗೆ ಅವಧಿಯಲ್ಲಿ ಉಪಹಾರ ಗೃಹಕ್ಕೆ ಸಂಬಂಧಿಸಿದಂತೆ, ಗ್ರಾಹಕರು ಮತ್ತು ಗುತ್ತಿಗೆದಾರರ ನಡುವೆ ಏನೇ ತಂಟೆ ತಕರಾರುಗಳು ಉಂಟಾದಲ್ಲಿ ಅವುಗಳನ್ನು ನಿಭಾಯಿಸುವ ಜವಾಬ್ದಾರಿ ಗುತ್ತಿಗೆದಾರರದ್ದೇ ಆಗಿರುತ್ತದೆ. ಆದರೆ, ಅಂತಹ ತಕರಾರುಗಳಿಂದ ಇಲಾಖೆಯ ಹಿತಕ್ಕೆ ಧಕ್ಕೆ ಉಂಟು ಮಾಡುವಂತಹ ಪರಿಸ್ಥಿತಿಯು ಉಂಟಾದಲ್ಲಿ ಗುತ್ತಿಗೆಯನ್ನು ರದ್ದುಗೊಳಿಸುವ ಅಧಿಕಾರ ಈ ಕೆಳ ಸಹಿದಾರರಿಗೆ ಇರುತ್ತದೆ.

12) ಗುತ್ತಿಗೆ ಅವಧಿಯಲ್ಲಿ ಉಪಹಾರ ಗೃಹದ ಇಲಾಖಾ ಕಟ್ಟಡ ಮತ್ತು ಅದಕ್ಕೆ ಅಳವಡಿಸಿರುವ ವಿದ್ಯುತ್ ಸಂಪರ್ಕ ಮೊದಲಾದ ಸರ್ಕಾರಿ ವಸ್ತುಗಳಿಗೆ ಯಾವ ರೀತಿಯಲ್ಲೂ ಹಾನಿ ಉಂಟಾಗದಂತೆ ಜಾಗರೂಕತೆಯಿಂದ ರಕ್ಷಿಸತಕ್ಕದ್ದು. ಗುತ್ತಿಗೆದಾರರಿಂದ ಅಥವಾ ಅವರು ನೇಮಿಸಿಕೊಳ್ಳುವ ಕೆಲಸಗಾರರಿಂದ ಯಾವುದೇ ಸರ್ಕಾರಿ ವಸ್ತು/ ಆಸ್ತಿಗೆ ಧಕ್ಕೆ ಉಂಟಾದಲ್ಲಿ ಅಥವಾ ನಷ್ಟ ಸಂಭವಿಸಿದಲ್ಲಿ ಅದನ್ನು ಗುತ್ತಿಗೆದಾರರು ತಮ್ಮ ಸ್ವಂತ ಖರ್ಚಿನಿಂದ ಸರಿಪಡಿಸತಕ್ಕದ್ದು. ಈ ದುರಸ್ತಿಯನ್ನು ಇಲಾಖಾ ಮೂಲಕ ಮಾಡಿಸಿದಲ್ಲಿ ಈ ಬಾಬ್ತು ತಗಲುವ ವೆಚ್ಚವನ್ನು ಗುತ್ತಿಗೆದಾರರು ಪಾವತಿಸಬೇಕಾಗುತ್ತದೆ. ಈ ಮೊಬಲಗನ್ನು ಭದ್ರತಾ ಠೇವಣಿಯಿಂದ ಹೊಂದಾಣಿಕೆ ಮಾಡಿಕೊಳ್ಳಲಾಗುವುದು. ಹಾಗೂ ಹೆಚ್ಚುವರಿ ಮೊತ್ತವನ್ನು ಕರ್ನಾಟಕ ಆರಣ್ಯ ಕಾಯಿದೆ–1963ರ, ಸೆಕ್ಷನ್–109ರ ಮೇರೆಗೆ ಕಂದಾಯ ಬಾಕಿ ಎಂದು ವಸೂಲು ಮಾಡಲಾಗುವುದು.

13) ಗುತ್ತಿಗೆದಾರರು ಅಥವಾ ಅವರು ನೇಮಿಸಿಕೊಳ್ಳುವ ಕೆಲಸಗಾರರು ಆನಗೋಡು ಪ್ರಾಣಿ ಸಂಗ್ರಹಾಲಯಕ್ಕೆ ಭೇಟಿ ಕೊಡುವ ಸಾರ್ವಜನಿಕರು ಅಥವಾ ಇಲಾಖಾ ಸಿಬ್ಬಂದಿಯವರೊಂದಿಗೆ ಸದಾ ಸೌಜನ್ಯದಿಂದ ವರ್ತಿಸತಕ್ಕದ್ದು ಮತ್ತು ಅನುಚಿತ ವರ್ತನೆಯಿಂದ ನಡೆದುಕೊಳ್ಳತಕ್ಕದ್ದಲ್ಲ.

14) ಉಪಹಾರ ಗೃಹವನ್ನು ಪ್ರತಿದಿನ ಬೆಳಗ್ಗೆ 8.00 ರಿಂದ ಸಂಜೆ 6.00 ಗಂಟೆವರೆಗೆ ನಡೆಸತಕ್ಕದ್ದು ವಿಶೇಷ ಸಂದರ್ಭಗಳಲ್ಲಿ ನಡೆಸಲು ಸಂಬಂಧಪಟ್ಟವರ ಅನುಮತಿ ಪಡೆಯಬಹುದು. ವಾರದಲ್ಲಿ ಒಂದು ದಿನ ಕಡ್ಡಾಯವಾಗಿ ರಜೆ.

15) ಗುತ್ತಿಗೆದಾರರು ಉಪಹಾರ ಗೃಹದ ಸುತ್ತ ಮುತ್ತಲಿನ ಜಾಗವನ್ನು ಸ್ವಚ್ಛವಾಗಿ ಇಟ್ಟುಕೊಳ್ಳತಕ್ಕದ್ದು. ತಿಂಡಿ–ತಿನಿಸು ಮಾಡುವ ಸ್ಥಳದಲ್ಲಿ ಸ್ವಚ್ಛತೆಯನ್ನು ಕಾಪಾಡುವುದು. ಉಪಯೋಗಿಸುವ ಪಾತ್ರೆ ಪಡಗಗಳನ್ನು ಯಾವಾಗಲೂ ಉಪಯೋಗಿಸುವ ಮುನ್ನ ಸರಿಯಾಗಿ ತೊಳೆಯತಕ್ಕದ್ದು.

16) ಗುತ್ತಿಗೆದಾರರು ಯಾವುದೇ ಸಂದರ್ಭದಲ್ಲಿ ಪಾಲಿಥೀನ್ ಚೀಲಗಳನ್ನು/ ಹಾಳೆಗಳನ್ನು ತಿಂಡಿ–ತಿನಿಸು ಒದಗಿಸಲು ಅಥವಾ ಪ್ಯಾಕ್ ಮಾಡಲು ಉಪಯೋಗಿಸಬಾರದು.

17) ಗುತ್ತಿಗೆದಾರರು ಕೇವಲ ಸಸ್ಯಹಾರಿ ತಿಂಡಿ ತಿನಿಸುಗಳನ್ನು ತಯಾರಿಸಿ ಒದಗಿಸಬೇಕು. ಯಾವುದೇ ಕಾರಣಕ್ಕೂ ಮಾಂಸಾಹಾರಿ ತಿನಿಸುಗಳನ್ನು ತಯಾರಿಸಬಾರದು ಅಥವಾ ಹೊರಗಡೆಯಿಂದ ತಂದು ಗ್ರಾಹಕರಿಗೆ ಒದಗಿಸಬಾರದು. ಅಲ್ಲದೇ ಯಾವುದೇ ನಿಷೇಧಿತ ಪದಾರ್ಥಗಳನ್ನು ಅಂದರೆ ಧೂಮಪಾನ (ಬೀಡಿ, ಸಿಗರೇಟು, ಚುಟ್ಟಾ) ಗಾಂಜಾ, ಅಫೀಮು, ಮದ್ಯ ಮುಂತಾದ ಮಾದಕ ಪದಾರ್ಥಗಳನ್ನು ಗುತ್ತಿಗೆದಾರರು ವ್ಯಾಪಾರ ಮಾಡುವಂತಿಲ್ಲ ಹಾಗೂ ಅವುಗಳನ್ನು ಉಪಹಾರ ಗೃಹದಲ್ಲಿ ದಾಸ್ತಾನು ಮಾಡುವಂತಿಲ್ಲ.

18) ಅರಣ್ಯ ಸಿಬ್ಬಂದಿಯ ಅರಣ್ಯ ರಕ್ಷಣಾ ಕಾರ್ಯದಲ್ಲಿ ಅಗತ್ಯವಿದ್ದಾಗಲೆಲ್ಲಾ ಪೂರ್ಣ ಸಹಕಾರವನ್ನು ನೀಡತಕ್ಕದ್ದು. ವನ್ಯ ಪ್ರಾಣಿಗಳಿಗಾಗಲೀ ಮರಗಿಡಗಳಿಗಾಗಲೀ ಯಾವುದೇ ರೀತಿಯ ಹಾನಿಯಾಗದಂತೆ ಎಚ್ಚರ ವಹಿಸತಕ್ಕದ್ದು. ಯಾವುದೇ ಮರಗಳನ್ನು ಕಡಿಯತಕ್ಕದ್ದಲ್ಲ ಹಾಗೂ ಅರಣ್ಯಕ್ಕೆ ಬೆಂಕಿ ಕೊಡುವುದನ್ನು ನಿಷೇಧಿಸಲಾಗಿದೆ. ಅರಣ್ಯ ಅಧಿನಿಯಮ 1963, ಅರಣ್ಯ ನಿಯಮಾವಳಿ 1969 ಅರಣ್ಯ ಸಂರಕ್ಷಣಾ ಕಾಯಿದೆ 1980. ವನ್ಯಜೀವಿ ಸಂರಕ್ಷಣಾ ಕಾಯಿದೆ 1972 ಹಾಗೂ ಕಾಲಕಾಲಕ್ಕೆ ಅರಣ್ಯ ಇಲಾಖೆಯಿಂದ ಹಾಗೂ ಸರ್ಕಾರದಿಂದ ಹೊರಡಿಸುವ ಆದೇಶಗಳನ್ನು ಗುತ್ತಿಗೆದಾರರು ಸದಾ ಪಾಲಿಸತಕ್ಕದ್ದು.

19) ಉಪಹಾರ ಗೃಹಕ್ಕೆ ಭೇಟಿ ನೀಡುವ ವೀಕ್ಷಕರಿಗೆ ಗುತ್ತಿಗೆದಾರರು ಶುದ್ಧವಾದ ನೀರನ್ನು ಒದಗಿಸಬೇಕು.

20) ಗುತ್ತಿಗೆ ಅವಧಿ ಮುಗಿದೊಡನೆ ಉಪಹಾರ ಗೃಹ ಕಟ್ಟಡವನ್ನು ಅದು ಯಾವ ಸ್ಥಿತಿಯಲ್ಲಿತ್ತೋ ಅದೇ ಸ್ಥಿತಿಯಲ್ಲಿ ಸಂಬಂಧಪಟ್ಟ ವಲಯ ಅರಣ್ಯಾಧಿಕಾರಿಯವರಿಗೆ ಮರಳಿ ವಹಿಸಿಕೊಡತಕ್ಕದ್ದು. ಆ ಸಮಯದಲ್ಲಿ ಕಟ್ಟಡಕ್ಕೆ ಅಥವಾ ಅಲ್ಲಿಯ ಯಾವುದೇ ಸರಕಾರಿ ಆಸ್ತಿಗೆ ನಷ್ಟ ಸಂಭವಿಸಿದಲ್ಲಿ ಅದನ್ನು ಗುತ್ತಿಗೆದಾರರು ತಾವೇ ಭರಿಸಬೇಕು. ತಪ್ಪಿದ್ದಲ್ಲಿ ಷರತ್ತು ಸಂಖ್ಯೆ 11ರಲ್ಲಿ ನಮೂದಿಸುವಂತೆ ಕ್ರಮ ಕೈಗೊಳ್ಳಲಾಗುವುದು.

21) ಗುತ್ತಿಗೆ ಅವಧಿ ಮುಗಿದ ನಂತರ ವಲಯ ಅರಣ್ಯಾಧಿಕಾರಿಯವರಿಂದ ಸಮಾಪನಾ ವರದಿಯನ್ನು ಪಡೆದು ಭದ್ರತಾ ಠೇವಣಿಯನ್ನು ವಾಪಸ್ ಪಡೆಯಬಹುದಾಗಿದೆ.

22) ಮೇಲ್ಕಂಡ ಗುತ್ತಿಗೆಯ ಬಗ್ಗೆ ಈ ಕೆಳ ಸಹಿದಾರರು ಅಥವಾ ಅವರ ಮೇಲಾಧಿಕಾರಿಗಳು ವಿಧಿಸಬಹುದಾದ ಯಾವುದೇ ಹೆಚ್ಚುವರಿ ಷರತ್ತುಗಳಿಗೂ ಗುತ್ತಿಗೆದಾರರು ಬದ್ಧರಾಗಿರತಕ್ಕದ್ದು.

23) ಗುತ್ತಿಗೆ ಬಗ್ಗೆ ಏನಾದರೂ ವಿವಾದ ಉಂಟಾದಲ್ಲಿ ನ್ಯಾಯಾಲಯದ ವ್ಯಾಪ್ತಿ ದಾವಣಗೆರೆ ನಗರಕ್ಕೆ ಸೀಮಿತವಾಗಿದೆ.

24) ಉಪಹಾರ ಗೃಹದಲ್ಲಿ ತಿಂಡಿ ತಿನಿಸುಗಳ ತಂಪು ಪಾನೀಯಗಳ ಮಾರಾಟ ದರದ ವಿವರವಿರುವ ಫಲಕವನ್ನು (ಬೋರ್ಡ್) ಸಾರ್ವಜನಿಕ/ ಪ್ರವಾಸಿಗರ ನೋಟಕ್ಕೆ ಅನುಕೂಲಕರವಾದ ಸ್ಥಳದಲ್ಲಿ ಪ್ರದರ್ಶಿಸತಕ್ಕದ್ದು.

25) ಗುತ್ತಿಗೆದಾರರ ಹಾಗೂ ಅವರ ಕೆಲಸಗಾರರು ಆನಗೋಡು ಪ್ರಾಣಿ ಸಂಗ್ರಹಾಲಯ ವೇಳಾ ಪಟ್ಟಿಗೆ ಬದ್ಧರಾಗಿರಬೇಕು ಮತ್ತು ಗುರುತಿನ ಚೀಟಿಯನ್ನು ವಲಯ ಅರಣ್ಯಾಧಿಕಾರಿ, ಇಂದಿರಾ ಪ್ರಿಯದರ್ಶಿನಿ ಪ್ರಾಣಿ ಸಂಗ್ರಹಾಲಯ ಇವರಿಂದ ಪಡೆದಿರತಕ್ಕದ್ದು.

26) ಗುತ್ತಿಗೆದಾರರು ಕೆಲಸಗಾರರನ್ನು ಮೇಲಿಂದ ಮೇಲೆ ಬದಲಾವಣೆ ಮಾಡತಕ್ಕದ್ದಲ್ಲ ಹಾಗೂ ಅಪರಿಚಿತರನ್ನು ನೇಮಿಸಿಕೊಳ್ಳತಕ್ಕದ್ದಲ್ಲ ಮತ್ತು ಆನಗೋಡು ಪ್ರಾಣಿ ಸಂಗ್ರಹಾಲಯದ ನಿಯಮಗಳನ್ನು ಅವರುಗಳಿಗೆ ಮನದಟ್ಟು ಮಾಡಿಕೊಡತಕ್ಕದ್ದು. ಅವರ ಚಟುವಟಿಕೆಗಳು ಉಪಹಾರ ಗೃಹಕ್ಕೆ ಸೀಮಿತವಾಗಿರಬೇಕು. ಕೆಲಸಗಾರರಿಗೆ ಗುತ್ತಿಗೆದಾರರು ಸಮವಸ್ತ್ರವನ್ನು ಒದಗಿಸಬೇಕು ಮತ್ತು ಉಪಹಾರ ಗೃಹ ನಡೆಯುವ ಸಂದರ್ಭದಲ್ಲಿ ಅವುಗಳನ್ನು ಧರಿಸತಕ್ಕದ್ದು.

27) ಸಲಹೆ ಮತ್ತು ದೂರು ಪೆಟ್ಟಿಗೆಯನ್ನು ಗುತ್ತಿಗೆದಾರರು ಉಪಹಾರ ಗೃಹದಲ್ಲಿ ಇಡಬೇಕು.

28) ಹೆಚ್ಚಿನ ವಿವರಗಳಿಗೆ ಈ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,
ದಾವಣಗೆರೆ ವಿಭಾಗ, ದಾವಣಗೆರೆ.

ಪಿ.ಆರ್. 644

**[ನಮೂನೆ–1]**

**[9ನೇ ನಿಯಮ ನೋಡಿ]**

**ವಾಣಿಜ್ಯ ತೆರಿಗೆ ಇಲಾಖೆ**

**ವಾಣಿಜ್ಯ ತೆರಿಗೆ ಆಯುಕ್ತರವರ ಕಛೇರಿ, ವಾಣಿಜ್ಯ ತೆರಿಗೆ ಕಾರ್ಯಾಲಯ–1, ಗಾಂಧಿನಗರ, ಬೆಂಗಳೂರು–560 009**

**ಅಧಿಸೂಚನೆ**

ಹುಬ್ಬಳ್ಳಿಯ ವಾಣಿಜ್ಯ ತೆರಿಗೆ ಇಲಾಖೆಯ ಜಂಟಿ ಆಯುಕ್ತರು (ಜಾರಿ) ಈ ಕಛೇರಿಯಲ್ಲಿ ಕರವಸೂಲಿಗಾರರಾಗಿ ಕಾರ್ಯ ನಿರ್ವಹಿಸುತ್ತಿರುವ **ಶ್ರೀಮತಿ ನೀಲವ್ವ ಗಂಗವ್ವ ನಾಡಗೌಡ್ರ** ಅವರಿಗೆ ಅವರ ಹೆಸರನ್ನು **ಶ್ರೀಮತಿ ನೀಲವ್ವ ನಿಂಗಪ್ಪ ಹೆಬಸೂರ** ಎಂದು ಬದಲಾಯಿಸಿಕೊಳ್ಳಲು ಅನುಮತಿ ನೀಡಲಾಗಿದೆ.

**ಪ್ರದೀಪ್ ಸಿಂಗ್ ಖರೋಲ**
ವಾಣಿಜ್ಯ ತೆರಿಗೆ ಆಯುಕ್ತರು, (ಕರ್ನಾಟಕ) ಬೆಂಗಳೂರು

ಪಿ.ಡಿ. 119